# ಸಿದ್ಧಗಂಗಾ

ಸಂಪುಟ-31. ಸಂಚಿಕೆ-5 ಮೇ-1995.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ವೀರ ವೈರಾಗ್ಯ ನಿರ್ಣಯ ಪರಮಾವತಾರ
ಸಾರಸದ್ಗುರು ಲಿಂಗ ಜಂಗಮವೆ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಈ ಲೋಕ ಆ ಲೋಕ ಲೋಕದೆಲ್ಲ ಲೋಕ
ಸಾಕಾರ ತೋರಿಸುವ ಶ್ರೀಗುರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಶಿವಯೋಗ ಶ್ರೀವಿಭುವೆ ಭವರೋಗ ವೈದ್ಯವೆ
ತವ ಚರಣ ದರುಶನವ ನೀಡೆನೆಗೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

--ಹೆಚ್. ವಿ. ವೀರಭದ್ರಯ್ಯ

| ಲೇಖನ | ಲೇಖಕರು | ಪುಟ |
|---|---|---|
| * ಶ್ರೀವಾಣಿ — | | 5 |
| * ಶ್ರೀ ಸಿದ್ಧಲಿಂಗೇಶ್ವರ ವಚನ — | | 7 |
| * ಸಂಪಾದಕೀಯ — | | 9 |
| * ಶಿವಕುಮಾರಸ್ವಾಮಿ ವಿಶ್ವಸಂಸಾರಿ — | ವೀಚಿ | 11 |
| * ಬಸವ ಜ್ಯೋತಿಗೆ ತೈಲವಾದವರು — | ರಾಜೇಂದ್ರಶಿಶು | 12 |
| * ಬಸವಣ್ಣನವರು ಮಾಡಿದ ಸಾಮಾಜಿಕ ಕ್ರಾಂತಿ — | ಶ್ರೀ ನಾಗೇಶನಿಲುಗಲೆ | 15 |
| * ಶರಣರು ಕಟ್ಟಿದಂಥ ಸ್ವಯಂಪೂರ್ಣ ಸಮಾಜ — | ಬ.ಗಿ. ಯಲ್ಲಟ್ಟಿ | 19 |
| * ಕೊಲುವನೇ ಮಾದಿಗ-ಒಂದು ವಿವೇಚನೆ — | ಡಾ. ಶ್ರೀಮತಿ ಗಂಗಮ್ಮ | 22 |
| * ಧಾರ್ಮಿಕ ಕ್ರಾಂತಿಕಾರಿ ಬಸವಣ್ಣ — | ಡಾ. ಅಹಲ್ಯ ಚಿಂತಾಮಣಿ | 28 |
| * ಪಂಚಾಚಾರಗಳು — | ಎನ್. ಸಿದ್ಧಲಿಂಗಯ್ಯ | 32 |
| * ಕ್ಷೇತ್ರವಾರ್ತೆ — | ಹೆಚ್. ಬಿ. ಗಂಗಾಧರಯ್ಯ | 41 |

# ಶ್ರೀ ವಾಣಿ



## ಮೇದರ ಕೇತಯ್ಯ

ಮೇದರ ಕೇತಯ್ಯ ಬಸವಣ್ಣನವರ ಸಮಕಾಲೀನ ಶರಣ, ವೃತ್ತಿಯಲ್ಲಿ ಬುಟ್ಟಿ ಹೆಣೆದು ಮಾರಾಟಮಾಡಿ ಬಂದ ಹಣದಿಂದ ಜೀವನ ನಡೆಸಿದ್ದ ಅಪರೂಪದ ವ್ಯಕ್ತಿ. ಕೇತಯ್ಯನ ಪುಣ್ಯಾಂಗನೆ ಸಾಕವ್ವ. ಅಪರೂಪದಸತಿ. ಅತಿಶಯವೆನಿಸುವ ಸತಿಪತಿಗಳು. ಕಾಯಕ ಹನ್ನೆರಡನೆ ಶತಮಾನ ಜಗತ್ತಿಗೆ ಕೊಟ್ಟ ದಿವ್ಯ ಸಂಪತ್ತು. ಸತ್ಯ ಶುದ್ಧ ಕಾಯಕದ ಉಚ್ಛ್ರಾಯ ಕಾಲ ಅದು. ಕಾಯಕ ಪರಹಿತಾರ್ಥಕ್ಕಾಗಿ ನಡೆಸುವ ಪ್ರಾಮಾಣಿಕ ಜೀವನ ವಿಧಾನ. ದೇಹ ಮನಸ್ಸುಗಳು ಪರಿಶುದ್ಧ ವಾಗಿದ್ದು ಕೈಗೊಳ್ಳುವ ಸಮಾಜೋನ್ನತಿಯ ಕೈಂಕರ್ಯ. ಸ್ವಾರ್ಥ ಇರುವುದಿಲ್ಲ. ಕಾಯಕದಲ್ಲಿ ಆತ್ಮ ಪೋಷಣೆಯಿರುತ್ತದೆ. ಆತ್ಮಕಲ್ಯಾಣದ ಜತೆಗೆ ಲೋಕ ಕಲ್ಯಾಣ ಸಾಧಿಸುತ್ತದೆ.

ಮೇದರ ಕೇತಯ್ಯ ಕಾಯಕ ಜೀವಿ. ಪವಿತ್ರ ಬುದ್ಧಿಮನಗಳ ತಪಸ್ವಿ. ಬಸವಣ್ಣನವರ ಬದುಕಿನಿಂದ ಜೀವನಾದರ್ಶಗಳಿಂದ ಪ್ರಭಾವಿತ ಹಾಗೂ ಹಿಂಬಾಲಕನಾದವನು. ಪ್ರತಿದಿನ ಕಾಡಿಗೆ ಹೋಗಿ ಬಿದಿರು ತಂದು ಬುಟ್ಟಿ ಹೆಣೆದು ಕಲ್ಯಾಣದ ಮಾರುಕಟ್ಟೆಯಲ್ಲಿ ಮಾರಿ ಬಂದ ಹಣದಿಂದ ದಾಸೋಹ ಮಾಡುತ್ತಿದ್ದಾತ. ವೇದಗಳಿಗಿಂತಲೂ ಬಸವಾದಿ ಶರಣರ ವಚನಗಳು ಜೀವನಾನುಭವದ ಮಂಗಳ ದೀಪಗಳೆಂದು ನಂಬಿ ನಡೆದವನು. ಶರಣರ ಸಮೂಹದಲ್ಲಿ ಕೇತಯ್ಯ ಬೆಲ್ಲದಚ್ಚಾಗಿ ಬೆಳೆಯುತ್ತ ಬಂದ. ಶರಣರಿಗೆ ಬಂಗಾರವಾದ. ಜನರಿಗೆ ನಿಜ ಪದವನ್ನೇರುವ ನಿಚ್ಚಣಿಕೆಯಾಗಿ ಬೆಳೆದ. ಕೇತಯ್ಯನ ಪತ್ನಿ ಸಾಕವ್ವ ಹೇಳಿಮಾಡಿಸಿದ ಹೆಂಡತಿ. ಪುಣ್ಯ ದಂಪತಿಗಳು. ಕಲ್ಯಾಣದ ನಂದಾದೀಪಗಳು. ಶರಣಧರ್ಮದ ಕುಡಿಗಳು. ಕಾಯಕದಲ್ಲಿ ಕಡುನಿಷ್ಠೆ; ದಾಸೋಹದಲ್ಲಿ ಆತ್ಮತೃಪ್ತಿ ಕಾಣುತ್ತಿದ್ದ ಸಾತ್ವಿಕರು.

ಒಮ್ಮೆ ಪರೀಕ್ಷೆಯೊಂದು ನಡೆಯಿತು. ಕೇತಯ್ಯನ ಕಾಯಕ ಒರೆ ಹಚ್ಚುವಂತಾಯಿತು. ಬುಟ್ಟಿಹೆಣೆಯಲು ಬೇಕಾದ ಬಿದಿರು ಸಂಗ್ರಹಿಸಲು ಕೇತಯ್ಯ ಕಾಡಿಗೆ ನಡೆದ. ಬಿದಿರು ಎಲ್ಲೂ ಕಾಣಲಿಲ್ಲ. ಬಹುದೂರ ಹೆಜ್ಜೆ ಹಾಕಿದ ಮಧ್ಯಾಹ್ನವಾಗುತ್ತ ಬಂತು. ದೂರದಲ್ಲಿ ಬಿದಿರ ಮೆಳೆಯೊಂದು ಕಾಣಿಸಿತು. ಸಂತೋಷದಿಂದ ಅಲ್ಲಿಗೆ ಓಡಿದ. ಬಿದಿರಮೆಳೆ ಏರಿದ. ಒಂದು ಬಿದಿರು ಕಡಿದ. ದುಃಖ ಉಕ್ಕಿಬಂತು. ಕಡಿದ ಬಿದಿರಿನಿಂದ ಬಂಗಾರ ಬಂತು. ಕೇತಯ್ಯನಿಗೆ ಅದು

"ಹುಳು"ವಾಗಿ ಕಾಣಿಸಿತು. "ಭಂಗಾರ ಹುಳು ಹತ್ತಿ ಭಂಗವಾಗಿದೆ ಬಿದಿರು" ಎಂದು ಮರುಗಿ ಕೆಳಗಿಳಿದು ಮುಂದೆ ಸಾಗಿದ. ಮತ್ತೊಂದು ಕಡೆ ಬಿದಿರು ಕಡಿದ. "ಮುತ್ತು ಮಾಣಿಕ್ಯ" ಬಂತು. ನೊಂದುಹೋದ. ಕಾಯಕಕ್ಕೆ ಭಂಗ ಬಂತಲ್ಲಾ ಎಂದು "ಮಳಮಳಿಸಿದ" ಬಂದ ಬಂಗಾರ ಮುತ್ತುಮಾಣಿಕ್ಯ ತನ್ನ ಕಾಯಕದ ಫಲವಲ್ಲವೆಂದು "ಹೊಲೆ"ಯೆಂದು ನಿರ್ಧರಿಸಿದ. ಕೊನೆಗೆ ಗಗನದೆತ್ತರಕ್ಕೆ ಬೆಳೆದ ಬಿದಿರು ಮೆಳೆಯೊಂದನ್ನು ಕಂಡು ಹಿಗ್ಗಿದ. ಅದನ್ನೇರಿದ. ಕಸಬಗತ್ತಿಯಿಂದ ಬಿದಿರು ಕಡಿದ. ಬಂಗಾರ ಬರಲಿಲ್ಲ; ಮುತ್ತು ಮಾಣಿಕ್ಯ ಬರಲಿಲ್ಲ. ಸಂತೋಷವಾಯಿತು. ಕಡಿದ ಬಿದಿರನ್ನು ಕೆಳಗೆಸೆದ. ಇಳಿಯುವಾಗ ಕಾಲುಜಾರಿ ಬಿದ್ದ. ಆಗಬಾರದ್ದು ಆಗಿಹೋಯಿತು. ಕಾಲುಮೇಲಾಗಿ ಬಿದ್ದ. ಕೆಳಗೆ ಬೀಳುವಾಗ ಬಿದಿರ ದಸಿಯೊಂದು ಎದೆಗೆ ನಾಟಿತು. ರಕ್ತ ಚಿಮ್ಮಿತು. ಎದೆಗುಂದಲಿಲ್ಲ ಕೇತಯ್ಯ ಮನೆಗೆ ಬಂದ. ನಾಟಿದ್ದ ದಸಿ ಹಾಗೆಯೇ ಇತ್ತು. ದಾಸೋಹಕ್ಕೆ ಹೊತ್ತಾಯಿತೆಂದು ಬಂದ. ದಾಸೋಹ ಮುಗಿಯುವವರೆಗೆ ಮುಳುಗಬೇಡವೆಂದು ಸೂರ್ಯನಿಗೆ ಕಾಯಕದ ಮೇಲೆ ಆಣೆಯಿಟ್ಟ. ಬುಟ್ಟಿ ಹೆಣೆದು ಸತಿ ಸಾಕವ್ವನಿಗೆ ಕೊಟ್ಟು ಮಾರಿಕೊಂಡು ಬಾ ಎಂದು ಹೇಳಿದ. ಸಾಕವ್ವ ಮಾರಿ ಕಾಯಕದ ಪ್ರತಿಫಲ ತಂದಳು. ಅದರಿಂದ ದಾಸೋಹ ಬಂದ ಗುರು ಜಂಗಮರಿಗೆ ನಡೆಯಿತು. ಕೇತಯ್ಯ ಸತಿಯನ್ನು ಕರೆದು ಹೇಳಿದ ತನ್ನ ಎದೆಗೆ ನಾಟಿರುವ ದಸಿಯನ್ನು ಕೀಳು. ಕಿತ್ತಾಗ ಪ್ರಾಣ ಹೋದರೂ ಹೋಗ ಬಹುದು ಅದಕ್ಕಾಗಿ ದುಃಖ ಬೇಡ. ಕಾಯಕ ಸಂದಿದೆ. ದಾಸೋಹ ಮುಗಿಯಿತು ಎಂದು ಹೇಳಿದ. ಸಾಕವ್ವ ದುಃಖ ಉಮ್ಮಳಿಸಿ ಬಂದರೂ ನುಂಗಿಕೊಂಡು ಕೇತಯ್ಯನ ಎದೆಗೆ ನಾಟಿದ್ದ ದಸಿ ಕಿತ್ತಳು. ರಕ್ತ ಬದಬದನೆ ಚಿಮ್ಮಿತು ಶರಣನ ಪ್ರಾಣ ಹೋಯಿತು. ಸಾಕವ್ವ ಅಳಲಿಲ್ಲ. ಪತಿಗೆ ಮಾತು ಕೊಟ್ಟಿದ್ದಂತೆ ನಡೆದು ಕೊಂಡಳು. "ಪತಿಯು ಲಿಂಗಾಗಿದ್ದ ಸತಿ ಶರಣೆನಾನಿದ್ದೆ ರತುನ ಕಾಯಕವೇ ಶಿವಪೂಜೆ। ಇಂದ್ಹೋತು ಜತನೇಕೆ ಇನ್ನೂ ಬಾಳುದಕೆ" ಎಂದು ಹಲುಬಿದಳು, ಅವಳ ದುಃಖದಲ್ಲಿ ಸ್ವಾರ್ಥವಿರಲಿಲ್ಲ. ಕಾಯಕ ರತ್ನಪ್ರಾಯವಾದ ಕಾಯಕ ನಿಂತಂತಾಯಿತಲ್ಲಾ ಎಂದು ಮರುಗಿದಳು. ತಾವು ಅಖಂಡವಾಗಿ ನಡೆಸಿಕೊಂಡು ಬಂದ ಶಿವಪೂಜೆ-ಕಾಯಕ ಇನ್ನಿಲ್ಲವಾಯಿತಲ್ಲಾ ಎಂದು ಹಳಹಳಿಸಿದಳು. ಮೇದರ ಕೇತಯ್ಯನಂಥ ಶರಣರಿದ್ದ ಸಮಾಜ ಬಸವಣ್ಣನವರ ತತ್ವಾದರ್ಶನಗಳಿಗೆ ಅನುಗುಣವಾಗಿ ಬಾಳಿದ್ದು ನಾಡಿನ ಭಾಗ್ಯ. ಯಾರಿಗೆ ಅಗಲಿ ಹುಟ್ಟು ಮುಖ್ಯ ವಲ್ಲ. ಬಾಳುವ ರೀತಿ ಮುಖ್ಯ. ಕೇತಯ್ಯನಿಂದ ಮೇದರ ಸಮಾಜಕ್ಕೆ ಗೌರವ ಬಂದಿತು.

---

[25-5-95ರಂದು ನೇರಳಾಪುರ-ಗೊಲ್ಲಹಳ್ಳಿಯಲ್ಲಿ ಬಸವ ಜಯಂತಿ ಸಮಾರಂಭದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ]

# ಶ್ರೀ ಸಿದ್ಧಲಿಂಗೇಶ್ವರ ವಚನ

ಗುರುಲಿಂಗ ಜಂಗಮದ ಭಕ್ತರೆಂದು ಗುಣಕಥನವನುಡಿದುಕೊಂಡು
ಎಮಗೆ ಅನ್ಯದೈವವಿಲ್ಲೆಂಬ ಸೋರೆಯ ಬಣ್ಣದ ಅಣ್ಣಗಳುನೀವು ಕೇಳಿಭೋ
ನೀವರಿಯದಿರ್ದರೆ ನಾ ಹೇಳಿಹೆ ಕೇಳಿಭೋ
ಹೆಣ್ಣೊಂದು ಭೂತ, ಮಣ್ಣೊಂದು ಭೂತ, ಹೊನ್ನೊಂದು ಭೂತ
ಹೆಣ್ಣು ನಿಮ್ಮದೆಂಬಿರಿ, ಮಣ್ಣು ನಿಮ್ಮದೆಂಬಿರಿ, ಹೊನ್ನು ನಿಮ್ಮದೆಂಬಿರಿ
ಅವೇ ಪ್ರಾಣವಾಗಿ ಸಾವುತ್ತ ಹುಟ್ಟುತ್ತಿಪ್ಪಿರಿ
ಆ ಭೂತಗಳು ನಿಮ್ಮ ಹಿಡಿದು ಹಿಸುಕಿ ಕೊಂದುಕಾಗಿ
ತಿಂದು ತೇಗಿ ಹೀರಿ ಹಿಪ್ಪೆಯಮಾಡಿ
ಗಾರುಮಾಡುತಿಪ್ಪವು ಕಾಣಿಭೋ
ಅವು ನೀವು ಹಿಡಿದು ಕೀರ್ತಿಸುತಿರ್ದು
ಎಮಗೆ ಅನ್ಯದೈವವಿಲ್ಲೆಂಬ ಕುನ್ನಿಮನುಜರ ಮೆಚ್ಚುವನೆ?
ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ

ಅಂಗದ ಮೇಲೆ ಲಿಂಗಧರಿಸಿಪವರಿಗೆ ಗುರುಲಿಂಗ ಜಂಗಮದ ಹೊರತು ಮತ್ತಾವ ದೇವತೆಗಳೂ ಉಪಾಸ್ಯವಾಗವು. ಹೀಗಿರುವಾಗ ತಾವು ಲಿಂಗಾಂಗಿಗಳೆಂದು ಹೇಳಿಕೊಳ್ಳುತ್ತಾ ತಮಗನ್ಯದೈವವಿಲ್ಲೆಂದು ಜಂಬಕೊಚ್ಚುತ್ತ ಕೆಲವು ಅಣ್ಣಂದಿರು ಹೆಣ್ಣು ಮಣ್ಣು ಹೊನ್ನು ಎಂಬ ಭೂತಗಳನ್ನೇ ತಮ್ಮ ಪ್ರಾಣಮಾಡಿಕೊಂಡು ಅವುಗಳನ್ನು ಸಂಪಾದಿಸುವುದಕ್ಕಾಗಿಯೇ ತಮ್ಮ ಆಯುಷ್ಯವನ್ನು ವೆಚ್ಚಮಾಡುವರು. ಅಂಥವರನ್ನು ಆ ಹೆಣ್ಣು ಮಣ್ಣು ಹೊನ್ನುಗಳನ್ನು ಹಿಡಿದುಕೊಂಡು ನಾವು ಅನ್ಯದೈವೋಪಾಸಕರಲ್ಲವೆಂದು ಹೇಳುವ ಕುನ್ನಿ ಮನುಜರನ್ನು ಮಹಾದೇವನು ಎಂದೂ ಮೆಚ್ಚಲಾರನು. ಶಿವಕೃಪೆಯನ್ನು ಪಡೆದು ಸಾರ್ಥಕ ಜೀವಿಗಳಾಗ ಬೇಕಾದರೆ ಗುರು ಲಿಂಗ ಜಂಗಮರಲ್ಲಿ ಅವ್ಯಭಿಚರಿತ ಭಕ್ತಿಯಿರಿಸಲೇ ಬೇಕು.

( ಕೃಪೆ:- ಷಟ್‌ಸ್ಥಲ ಜ್ಞಾನಸಾರಾಮೃತ- ಶ್ರೀ ತೋಂ. ಸಿ. ಕೈಂ. ಸೇವಾಸಂಘ, ಎಡೆಯೂರು, ಗದಗ. )

## ಸಿದ್ಧಗಂಗಾ ಮಾಸ ಪತ್ರಿಕೆ

### ಸಂಪಾದಕ ಮಂಡಳಿ

**ಚನ್ನಪ್ಪ ಎರೇಸೀಮೆ**
ಪ್ರಧಾನ ಸಂಪಾದಕರು.

**ಹೆಚ್. ವಿ. ವೀರಭದ್ರಯ್ಯ**
ಸಂಪಾದಕರು

**ಎಂ. ರೇಣುಕಾರಾಧ್ಯ**
ಸಹ ಸಂಪಾದಕರು

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು

* * *

### ಸಲಹಾ ಸಮಿತಿ

ಡಾ|| ಎಂ. ಎಸ್. ಚನ್ನಬಸಪ್ಪ
ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹಜೀಯರ್
ಟಿ. ಆರ್. ಮಹದೇವಯ್ಯ
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**
ಮುದ್ರಕರು

* * *

**ಶ್ರೀ ಸಿದ್ಧಗಂಗಾಕ್ಷೇತ್ರ**
ಪ್ರಕಟಣೆಯ ಸ್ಥಳ


### ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 31ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟ್ಯಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


"ಸಂಪಾದಕರು"
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.



**1–1–95 ರಿಂದ ಚಂದಾ ದರ**

ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

# ಸಂಪಾದಕೀಯ

ಣ್ಣು ಕಳಚಿ ಬಿತ್ತು

ಸಿ.ಎಂ.ಆರ್ ಎಂದೇ ಹೆಸರಾಗಿದ್ದ ಶ್ರೀ ರುದ್ರಾರಾಧ್ಯಶರ್ಮರು 14.4.1995 ದು ಲಿಂಗೈಕ್ಯರಾದರು. ಶಾಸ್ತ್ರಿಗಳ ಜೀವನ ನಿರ್ಮಲವಾದುದು. ನಿಷ್ಕಾಮ ಸೇವೆಗೆ ತ್ತೊಂದು ಹೆಸರಾಗಿದ್ದರು. ಋಣತತ್ವವನ್ನರಿತ ಪ್ರಾಜ್ಞರು. ಎಲೆಮರೆಯ ಹೂವಿ ತೆ ಎಲ್ಲರ ಮಧ್ಯೆ, ಎಲ್ಲದರ ನಡುವೆ ಇದ್ದು ಹೋದರು. ಪದ್ಮ ಪತ್ರದ ಮೇಲೆ ನೀರ ಯಾಗಿ ನಿರ್ಲಿಪ್ತ ಜೀವನ ನಡೆಸಿ ಧನ್ಯರಾದರು. ಆದರ್ಶವನ್ನು ಬಾಳಿದರು. ಕುಟುಂಬ ರ್ಗದವರಿಗೆ, ಸಹೋದ್ಯೋಗಿಗಳಿಗೆ, ಶಿಷ್ಯ ಸಮೂಹಕ್ಕೆ ಸವಿನೆನಪಿನ ಬುತ್ತಿಯ ತ್ತು ಸಾಗಿದರು. ಸಾರ್ಥಕಶಾಸ್ತ್ರಿಗಳ ಬದುಕು.

ಶ್ರೀ ಸಿದ್ಧಗಂಗಾ ಮಠದ ಸಂಪತ್ತು ಸೇವಾ ಸಂಪತ್ತು. ದಾಸೋಹ ಕ್ಷೇತ್ರವೆಂದೇ ಸಿದ್ಧಿಯಾಗಿರುವ ಶ್ರೀಮಠದ ಕಮ್ಮಟದಲ್ಲಿ ಮೂಡಿ ಬಂದ ಶ್ರೀ ಸಿ.ಎಂ. ರುದ್ರಾ ಧ್ಯ ಶರ್ಮರು 1906 ರಲ್ಲಿ ಚುಂಚನಕುಪ್ಪೆಯಲ್ಲಿ ಹುಟ್ಟಿದರು. ಶರಣ ಸಾತ್ವಿಕರೆನಿಸಿದ ುದ್ದು ಬಸಪ್ಪ ಪುಟ್ಟಬಸಮ್ಮನವರ ಪ್ರೀತಿಯ ಮಗನಾಗಿ ಬೆಳೆದರು. ಗಣಪತಿ ಳ್ಳಿಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ನಡೆಸಿದರು. 1926 ರಲ್ಲಿ ಶ್ರೀ ಸಿದ್ಧಗಂಗಾ ಠಕ್ಕೆ ಬಂದರು. ಅಂದು ಮೊದಲುಗೊಂಡು ಲಿಂಗೈಕ್ಯರಾಗುವ ದಿನದವರೆಗೆ ಸಿ.ಎಂ. ರ್ ಶ್ರೀಮಠದ ಅವಿಭಾಜ್ಯ ಅಂಗವಾಗಿ, ಸೇವಾ ಕೈಂಕರ್ಯಮಣಿಹದ ವಿನಯಶೀಲ ದರ್ಶವನ್ನು ಸಾಕಾರಗೊಳಿಸುತ್ತ ಬಂದರು. ಶ್ರೀಮಠದಲ್ಲಿ ಸಂಸ್ಕೃತಾಭ್ಯಾಸವನ್ನು ್ರರಂಭಿಸಿ ಉನ್ನತ ವ್ಯಾಸಂಗಕ್ಕಾಗಿ ಕಾಶಿಗೆ ತೆರಳಿದರು. ಅತ್ಯಂತ ಕಷ್ಟಸ್ಥಿತಿಯಲ್ಲಿ ್ಯಾಸಂಗ ಮುಂದುವರಿಸಿದರು. ಶ್ರೀಯುತರ ಶ್ರದ್ಧೆ ನಿಷ್ಠೆಗಳನ್ನು ಆರ್ಥಿಕ ಮುಗ್ಗ ನ್ನು ಗಮನಿಸಿದ್ಧ ಪೂಜ್ಯ ಶ್ರೀಗಳವರು ಸಿ.ಎಂ.ಆರ್ ಅವರಿಗೆ ಸಹಾಯ ನೀಡುತ್ತ ಂದರು. ಆ ಉಪಕಾರವನ್ನು ಹಿಮಾಲಯದಂತೆ ಭಾವಿಸಿದ ಶಾಸ್ತ್ರಿಗಳು ಶ್ರೀಮಠಕ್ಕೆ ಮ್ಮನ್ನು ಅಂದೇ ಅರ್ಪಿಸಿಕೊಂಡರು. ಜೀವನದುದ್ದಕ್ಕೂ ಯಾವ ಆಸೆ ಆಮಿಷ ಕೀರ್ತಿ ಾರ್ಥಗಳಿಗೂ ಆಶಿಸದೆ ಕೇವಲ ಋಣಮುಕ್ತಿಯನ್ನು ತಪಸ್ಸೆಂಬಂತೆ ನಡೆಸಿದರು. 942 ರಲ್ಲಿ ವ್ಯಾಕರಣ ಪದವಿಯನ್ನು ಪಡೆದು ಆಚಾರ್ಯರಾದರು 7.6.1942 ರಿಂದ ್ರೀಮಠದ ಸಂಸ್ಕೃತ ಕಾಲೇಜಿನಲ್ಲಿ ಉಪಪ್ರಾಧ್ಯಾಪಕರಾಗಿ ಸೇವಾರಂಭ ಮಾಡಿದರು. 966 ರಲ್ಲಿ ಪ್ರಾಧ್ಯಾಪಕರಾಗಿ ಬಡ್ತಿ ಪಡೆದರು. ಶಾಸ್ತ್ರಿಗಳ ವ್ಯಾಸಂಗದ ಹಂಬಲ ೊಡ್ಡದು. 1970 ರಲ್ಲಿ 74 ವರ್ಷದ ತುಂಬು ತಾರುಣ್ಯದಲ್ಲಿ ಶಕ್ತಿ ವಿಶಿಷ್ಟಾದ್ವೈತ

ವಿದ್ವತ್ ಪರೀಕ್ಷೆಗೆ ಕೂತು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು "ಶ್ರದ್ಧಾವಾ
ಲಭತೆ ವಿದ್ಯಾ" ಎಂಬುದನ್ನು ಸಾಧಿಸಿ ತೋರಿದರು. ಕುಟುಂಬಿಗಳಾಗಿದ್ದೂ ವಿದ್ವಾ
ಆದರು. ಕುಟುಂಬ ಜೀವನ ವ್ಯಾಸಂಗಾಭಿಲಾಷಿಗೆ ಅಡ್ಡಿಯಾಗಲಾರದು ಎಂಬು
ಉದಾಹರಣೆಯಾದರು. 1975 ರಲ್ಲಿ ವೃತ್ತಿ ಜೀವನದಿಂದ ನಿವೃತ್ತರಾದರು. ನಿವೃ
ಯನಂತರವೂ 1993ರ ತನಕ ಅಧ್ಯಾಪನ ನಡೆಸಿದರು. 1980 ರಲ್ಲೂ ಸಂಸ್ಕೃ
ವಿದ್ವಾಂಸರೆಂದು ರಾಜ್ಯಪ್ರಶಸ್ತಿ ಪುರಸ್ಕೃತರಾದರು.

ಬಿಳಿ ಕಚ್ಚೆ ಪಂಚೆ, ಷರಟು, ಉತ್ತರೀಯಗಳಿಂದ ಸದಾ ಶೋಭಿತರಾಗಿ ಕಾ
ತ್ತಿದ್ದ ಸಿ.ಎಂ.ಆರ್ ಕಥಾಕೋಶವಾಗಿದ್ದರು. ಸಂಸ್ಕೃತ, ಕನ್ನಡ, ಹಿಂದಿ ಭಾಷೆಗಳನ್ನ
ತಿದ್ದ ಶಾಸ್ತ್ರಿಗಳು ಹೇಳುತ್ತಿದ್ದ ಕಥೆಗಳು ನೀತಿಯುತವಾಗಿರುತಿದ್ದವು. ಪುರಾಣ, ಇ
ಹಾಸ, ಜೀವನಾನುಭವಗಳಿಂದ ಸಂಗ್ರಹಿತವಾಗಿದ್ದ ಆ ಕಥೆಗಳೆಲ್ಲವನ್ನೂ ಶಾಸ್ತ್ರಿಗ
ಬರೆದಿಡಲಿಲ್ಲವಲ್ಲಾ ಎಂಬ ಕೊರಗು ಉಳಿಯಿತು. ಪ್ರತಿ ವರ್ಷ ಗಣೇಶ ಚತುರ್ಥಿ
ಯಂದು ಶಮಂತಕಮಣಿ ಉಪನ್ಯಾಸ ನೀಡುತ್ತಿದ್ದ ಶಾಸ್ತ್ರಿಗಳ ಸೇವೆ ಇನ್ನಿಲ್ಲವಾಯಿತ
ಶ್ರೀಮಠದ ರಚನಾತ್ಮಕ ಚಟುವಟಿಕೆಗಳಲ್ಲಿ ರುದ್ರಾರಾಧ್ಯಶರ್ಮರು ಇದ್ದೇ ಇರು
ದ್ದರು. ಒಮ್ಮೆ ಶಾಸ್ತ್ರಿಗಳ ಮನೆಯಲ್ಲಿ ಪೂಜ್ಯ ಶ್ರೀಗಳವರ ಶಿವಪೂಜೆ ನಡೆದಿತ್ತು
ಮನೆಗೆ ಹಿರಿಯರಾದ ಶಾಸ್ತ್ರಿಗಳು ಮನೆಯಲ್ಲಿರಬೇಕಾಗಿತ್ತು. ಆದರೆ ಅವರು ವಿದ್ಯಾ
ರ್ಥಿಗಳನ್ನು ಕರೆದುಕೊಂಡು ಶ್ರೀ ಮಠದ ಹೊಲದಲ್ಲಿ ಕಳೆಕೀಳಲು ಹೋಗಿದ್ದರು
ಅಷ್ಟು ಸೇವಾನಿಷ್ಠೆ ಶಾಸ್ತ್ರಿಗಳದ್ದು. ಸಂಸಾರದ ಜವಾಬ್ದಾರಿಯನ್ನೆಲ್ಲ ಶ್ರೀಮತಿ ರುದ್ರಾ
ರಾಧ್ಯರಿಗೇ ಬಿಟ್ಟು ಕೊಟ್ಟಿದ್ದರು. ಅವರ ಧರ್ಮ ಪತ್ನಿಯವರು ಅಷ್ಟೇ, ತಮ್ಮ ಪ
ಮಠದ ಸೇವಾ ಕಾರ್ಯಗಳಲ್ಲಿ ತೊಡಗಿದ್ದಾರೆಂಬುದನ್ನು ತಿಳಿದು ವಿನಮ್ರವಾಗಿ ಹೆಜ್ಜೆ
ಹಾಕುತ್ತ, ಬಂದರು. ಗೃಹಕೃತ್ಯದ ಚಿಂತೆಯನ್ನು ತಾವೇ ನಿರ್ವಹಿಸಿದರು. ಪರಿಣಾಮ
ವಾಗಿ ಸಿ.ಎಂ.ಆರ್ ಮನಸ್ಸಿಗೆ ಹಿತವಾದ ಮಾರ್ಗದಲ್ಲಿ ಸಾಗಿದರು. ಪುಣ್ಯ ಜೀವಿಗಳ
ದರು ನೆನಪಾಗಿ ಉಳಿದರು ಶ್ರೀಮಠದ ಸೇವೆ ಮಾಡಿದರು. ಪೂಜ್ಯ ಶ್ರೀಗಳವರ ದಾಸೋ
ಹದಲ್ಲಿ ದುಡಿದು ಧನ್ಯರಾದರು.

ಎರಡು ಗಂಡು, ಮೂರು ಹೆಣ್ಣು ಮತ್ತು ಪತ್ನಿ ಅಪಾರ ಬಂಧು ಬಳಗ, ಸಾ
ರಾರು ಶಿಷ್ಯರನ್ನು ಬಿಟ್ಟು ಲಿಂಗದೆಡೆಗೆ ನಡೆದು ಹೋದ ಶ್ರೀ ರುದ್ರಾರಾಧ್ಯಶರ್ಮ
ಜೀವನ ಸಾರ್ಥಕ ಜೀವನ. ಅವರ ಕುಟುಂಬ ವರ್ಗದವರಿಗೆ ಅವರ ಅಗಲಿಕೆಯ
ನೋವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ, ಸಿ.ಎಂ
ಆರ್. ಅವರ ಆತ್ಮ ಲಿಂಗಾನಂದದಲ್ಲಿರಲಿ ಎನ್ನುತ್ತ "ಸಿದ್ಧಗಂಗಾ" ಶ್ರದ್ಧಾಂಜಲಿ
ಯನ್ನರ್ಪಿಸುತ್ತದೆ. "ತೊಟ್ಟು ಬಿಟ್ಟು ಹಣ್ಣು ಕಳಚಿ ಬಿತ್ತು"

# ದಿವ್ಯ ಶಿವಜ್ಯೋತಿ ಶ್ರೀ ಶಿವಕುಮಾರಸ್ವಾಮಿಗಳು

ಆಧುನಿಕ ಶ್ರೀಶೈಲ ಮುಕ್ತಿ ಕ್ಷೇತ್ರವೆಂದು, ಶಿಕ್ಷಣ ವಿದ್ಯಾಲಯವೆಂದು ಪ್ರಸಿದ್ಧಿಯನ್ನು ಪಡೆದು ಸಿದ್ಧಗಂಗೆ ಕ್ಷೇತ್ರವು ಶೋಭಿತವಾಗಿದ್ದರೆ, ಇನ್ನೊಂದೆಡೆ ಧರ್ಮವಿದ್ಯಾಲಯದಿಂದ ಸಂಶೋಭಿತವಾಗಿದೆ. ಈ ಧರ್ಮವಿದ್ಯಾಲಯವೇ ಶಾಂತಿ ಸಮಾಧಾನದ ಸುಕ್ಷೇತ್ರ. ನೋಡುವವರ ಕಣ್ಮನ ಸೆಳೆಯುವ, ಹರಿಯುವ ಮನವನ್ನು ಸೆರೆಹಿಡಿದು ಮನಸೂರೆಗೊಳಿಸುವ ಶ್ರೀ ಸಿದ್ಧಗಂಗಾ ಮಠ. ಈ ಮಠವು ಇತಿಹಾಸದ ಪುಟಗಳಲ್ಲಿ ಸುವರ್ಣರೇಖಾಂಕಿತ ಸುಂದರ ಚಿತ್ರವಾಗಿದೆ. ಮಠವು ನೆನಪಿಗೆ ಬಂದೊಡನೆಯೇ ಭವ್ಯ ಸನ್ಮೂರ್ತಿ ನಮ್ಮ ಕಣ್ಣು ಕೊರಯಿಸಿ, ಹೃದಯವನ್ನು ವ್ಯಾಪಿಸಿ ಆನಂದ ತುಂದಿಲರಾಗುವಂತೆ ಮಾಡುತ್ತದೆ. ಆ ಮೂರ್ತಿಯೇ "ಸರ್ವಾಂಗ ಸುಂದರ-ವಾಧಿ ಅಳಿತುಳುಕದಿರ್ಪ ಮುಗಮುಗಿಪ ಬಿರಿಮುಗುಳಂತೆ. ಪಿಕಚಂಚು ಸಂಚಾರವಿಲ್ಲದ ಎದಳಿರಂತೆ, ಚಿತ್ತಾಕರ್ಷಣೆ ರೂಪವನ್ನೊಳಗೊಂಡು ಬ್ರಹ್ಮಚೈತನ್ಯವನ್ನು ಹೊರ ಸೂಸುವ ಅದಮ್ಯವಾದ ಸಿದ್ಧರಲ್ಲಿ ಸಿದ್ಧವಾದ ಶ್ರೀ ಶಿವಕುಮಾರಮಹಾ ಅಪ್ಪಗಳವರು ಅವರ ವಜ್ರಮಹೋತ್ಸವವನ್ನು ಮುಂಬರುವ ವರ್ಷ ಭಕ್ತಿ ಭಾವನೆಯಿಂದ ನಾವೆಲ್ಲರೂ ಆಚರಿಸಲಿರುವದು ಸಂತೋಷದ ಸಂಗತಿ

'ಈಶ್ವರನ ಮುಂದೆ ನಂದಿ' ಎನ್ನುವಂತೆ ಶ್ರೀ ಉದ್ದಾನ ಶಿವಯೋಗಿಗಳ ಜತೆ ಅವರ ನೆರಳಿನಂತೆ ತ್ರಿಕರಣಪೂರ್ವಕವಾಗಿ ಸೇವೆಸಲ್ಲಿಸಿ ಸಂಪೂರ್ಣ ಗುರುಕೃಪೆಯನ್ನು ಪಡೆದುಕೊಂಡರು. ಇವರ ಸದ್ಭಾವ, ಸತ್ಸೇವೆ ದಾಸೋಹಭಾವ, ಶಿವಾನುಭವ ಜೀವನವ ನೋಡಿ ಇವರನ್ನು ಸ್ಮರಿಸದ ಮನುಜರೇ ಇಲ್ಲ.

'ಮರದ ನೆರಳಿನಲ್ಲಿದ್ದು ತನ್ನ ನೆರಳನ್ನು ಹುಡುಕಬಹುದೇ ? ಎನ್ನುವ ಬಸವನ ವಾಣಿಯನ್ನು ಆಯುಷ್ಯದುದ್ದಕ್ಕೂ ಆಚರಿಸುತ್ತಿರುವ ಮಹಾಚೇತನಮೂರ್ತಿ. ಉದ್ದಾನಶಿವಯೋಗಿಗಳ ಕರಕಮಲ ಸಂಜಾತರಾಗಿ ಅವರ ಕೃಪಾಛತ್ರದ ನೆರಳಿನಲ್ಲಿ ಬೆಳೆದು ಬಾಳಿದ ಅವರು ತಮ್ಮ ನೆರಳನರಸುವದಿರಲಿ, ನಾನೆಂಬ ನೆರಳು ಕೂಡಾ ಅಪ್ಪಿ ತಪ್ಪಿ ಬೀಳದಂತೆ ಎಚ್ಚರಿಕೆವಹಿಸಿದರು. ಆ ಶಿವಯೋಗಿಗಳ ಅನುಗ್ರಹ ಗಂಗೋತ್ರಿಯಲ್ಲಿ ಉಗಮಿಸಿದ ಅವರ ಬದುಕಿನ ಭಾಗೀರಥಿಯ ನೀರು ಗಂಗೋತ್ರಿಯದಾದರೂ ದಾರಿಯು ತನ್ನದೆಂಬ ರೀತಿಯಲ್ಲಿ ಹರಿದು ಧರ್ಮಸಂಗ್ರಹ, ಲೋಕಸಂಗ್ರಹ, ಸಾಹಿತ್ಯ ಸಂಗ್ರಹಗಳ ತ್ರಿವೇಣಿಗೆ ಜನ್ಮದಾಯಿನಿಯಾಗಿ ಮೆರೆಯುತ್ತಿರುವದು.

ಜೀವಕಾಮತ್ವ ಶಿವಯೋಗ ಸಿದ್ಧಿಗಳನ್ನು ಸ್ವಾಮಿಗಳಾದವರು ಪಡೆದಿರಬೇಕಾದುದು ಅತ್ಯಂತ ಅವಶ್ಯಕ. ಇವುಗಳ ಜೊತೆಗೆ ಗುರುಭಕ್ತಿ, ಸಮಾಜಸೇವಾಕಾಂಕ್ಷೆಗಳು ಸೇರಿಕೊಂಡರೆ, ಬಂಗಾರಕ್ಕೆ ಕುಂದಣಕೂಡಿಸಿದಂತೆ. ಕಬ್ಬಿನ ಮೇಲೆ ಜೇನಿಟ್ಟಂತೆ ಆಗುತ್ತದೆ. ಅಂತಹ ಸ್ವಾಮಿಗಳೇ ಆದರ್ಶ ಸ್ವಾಮಿಗಳಾಗುತ್ತಾರೆ. ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳು ಇವೆಲ್ಲ ಏಕೀಭವಿಸಿದ್ದರಿಂದ ನಿಜವಾದ ಆದರ್ಶಸ್ವಾಮಿಗಳಾಗಿರುವರು.

ಪೂಜ್ಯರ ಸಮಾಜ ಸೇವೆ ಮತ್ತೊಂದು ದಿಕ್ಕಿನಲ್ಲಿ ಮುಂದುವರೆಯಿತು. ಅವಿದ್ಯೆ, ಅಜ್ಞಾನಗಳ ತೋಳತೆಕ್ಕೆಯಲ್ಲಿ, ತೊಳಲಿ ಬಳಲುತ್ತಿರುವ ಸಮಾಜವನ್ನು ಉದ್ಧರಿಸಲು ಮನನೊಂದವರು. ವಿದ್ಯಾರ್ಥಿಗಳಿಗೆ ಊಟ ವಸತಿಯ ಸೌಕರ್ಯವನ್ನು ಕೊಡಲು ತಮ್ಮ ಮಠದಲ್ಲಿ ಪ್ರಸಾದನಿಲಯ ಹಾಗೂ ವಸತಿ ಕೋಣೆಗಳನ್ನು ಸ್ಥಾಪಿಸಿದರು. ಪ್ರಾಥಮಿಕ ಶಾಲೆಯಿಂದ ಹಿಡಿದು ಪಿ.ಹೆಚ್.ಡಿ ವರೆಗೆ ಅಧ್ಯಯನ ಮಾಡುವವರೆಲ್ಲರೂ ಪ್ರತಿದಿನ ಹತ್ತು ಸಾವಿರಕ್ಕೂ ಹೆಚ್ಚು ಜನ ವಿದ್ಯಾರ್ಥಿಗಳು ಪ್ರಸಾದ ಸ್ವೀಕರಿಸುವರು. ತುತ್ತು ತುತ್ತಿಗೂ ಸ್ಮರಿಸುತ್ತಾ ತಮ್ಮ ಬಾಳನ್ನು ಇಲ್ಲಿ ಸಾಕಷ್ಟು ಜನ ಬೆಳಗಿಸಿಕೊಂಡಿದ್ದಾರೆ. ತತ್ಫಲವಾಗಿ ವಿದ್ಯಾಕ್ಷೇತ್ರದಲ್ಲಿ ಒಂದು ದೊಡ್ಡ ಕ್ರಾಂತಿಯೇ ವಿಶ್ವಸಂಸ್ಕೃತಿಯ, ನಂದನವನ, ಅಭಿನವ ಕಲ್ಯಾಣ ನಗರ ಈ ಭಾಗದಲ್ಲಾದಂತಾಯಿತು. ಪೂಜ್ಯರು ಹಲವಾರು ಧಾರ್ಮಿಕ ಸಾಹಿತ್ಯ ಪ್ರಕಟಣೆಗಳನ್ನು ಪ್ರಕಟಿಸಿರುವರು. ಸಮಾಜದ ಸರ್ವಾಂಗೀಣ ಬೆಳವಣಿಗೆಗಾಗಿ ೧೯೬೪ರಲ್ಲಿ "ಸಿದ್ಧಗಂಗಾ" ಧಾರ್ಮಿಕ ಸಾಹಿತ್ಯಕ ಕ್ಷೇತ್ರದಲ್ಲಿ ಹೊಸ ಹೆಜ್ಜೆಯನ್ನು ಮೂಡಿಸಲು ಮಾಸಿಕ ಪತ್ರಿಕೆಯನ್ನು ತೆಗೆದರು. ಬಸವಜಯಂತಿ ಆಚರಣೆ, ಶಿವಾನುಭವದಂತಹ ಕಾರ್ಯಕ್ರಮ, ಸಂಸ್ಕೃತ ವಿದ್ವತ್ ಪರೀಕ್ಷೆ ಇತ್ಯಾದಿಗಳನ್ನು ಸಮಾಜದಲ್ಲಿ ಆರಂಭಿಸಿ ಹೊಸ ಚೇತನವನ್ನು ಮೂಡಿಸಿದರು. ಸಮಾಜೋದ್ಧಾರಕ್ಕಾಗಿ ಮಾಡಿದ ಕಾರ್ಯಗಳು ಹಲವಾರು. ಆದುದರಿಂದ ಅವರು ಆದರ್ಶಸಮಾಜ ಸುಧಾರಕರಲ್ಲಿ ಆದರ್ಶರು. ಬಸವಾದಿ ಪ್ರಮಥರ ಹಾದಿಯಲ್ಲಿ ನಡೆಯುತ್ತಿರುವ ಪೂಜ್ಯರು ತಾವು ಅಳವಡಿಸಿಕೊಂಡಿದ್ದ ಹಿರಿಯಗುಣಗಳ ಸಾರವನ್ನೆಲ್ಲ ಸಮಾಜಕ್ಕಾಗಿ ಧಾರೆ ಎರೆದು ತಮ್ಮನ್ನೇ ತಾವು ಸಮಾಜಕ್ಕೆ ಅರ್ಪಿಸಿಕೊಳ್ಳುತ್ತಿರುವ ಸರಳಜೀವಿ.

ಉದ್ದಾನಶಿವಯೋಗಿಗಳು ಹೊತ್ತಿಸಿದ ಜ್ಯೋತಿ ಅವರ ತಪೋ ಬಲದಿಂದ ಬೆಳಗುತ್ತಿರುವ ಮಠವು ಅವರ ಲೋಕೋತ್ತರ ಶಿಷ್ಯರು ಕರಕಮಲ ಸಂಜಾತರಾದ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳ ನೇತೃತ್ವದಲ್ಲಿ ದಿನಕ್ಕೊಂದು ಚೆಂದಾಗಿ, ಕ್ಷಣಕ್ಕೊಂ ತೆರನಾಗಿ ಬೆಳೆಯುತ್ತಾ ಧರ್ಮ ಜ್ಯೋತಿಯನ್ನು ಬೆಳಗಿಸುತ್ತಾ ಸಾಗಿದೆ. ಈ ಎಲ್ಲ ಕಾರ್ಯಗಳನ್ನು ನೋಡಿದಾಗ ಶಿವಕುಮಾರಸ್ವಾಮಿಗಳಲ್ಲಿ ಏನೋ ಒಂದು ಅವ್ಯಕ್ತಶಕ್ತಿ ಅಡಗಿದೆ ಎಂದೆನಿಸುತ್ತದೆ. ಆದ್ದರಿಂದ ಇವರು ವ್ಯಕ್ತಿಯಲ್ಲ ದೈವೀಶಕ್ತಿ.

ಜಾತಿಮತ ಪಂಥವೆನ್ನದೇ ಸರ್ವರೂ ಶಿವನ ಕುಸುಮಗಳು ಎನ್ನುವ ಹಿರಿದಾದ ಭಾವ, ಹತ್ತು ಸಾವಿರಕ್ಕೂ ಮೀರಿ ಅನ್ನಪ್ರಸಾದ, ಜ್ಞಾನಪ್ರಸಾದ, ವಸತಿಸೌಕರ್ಯ. ನೂರಾರುಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತ ಬಂದಿರುವ ಎಂಬತ್ತೆಂಟಕ್ಕೆ ಅಡಿಇಟ್ಟ ವಯೋವೃದ್ಧರು, ಜ್ಞಾನಸಂಪನ್ನರೂ, ಆದ ಪೂಜ್ಯ ಡಾ|| ಶ್ರೀ ಶಿವಕುಮಾರಮಹಾ ಸ್ವಾಮಿಗಳ ಪಾದಧೂಳಿಯಿಂದ ಪಾವನಗೊಂಡ ಪುಣ್ಯಮಯಿಕ್ಷೇತ್ರ ಶ್ರೀ ಸಿದ್ಧಗಂಗಾ ಕ್ಷೇತ್ರ.

---

**—ಗುರುಮೂರ್ತಿ ದೇವರು ಹಿರೂರು,** ಎಂ. ಎ. ಕುಂಬಾರ ರಸ್ತೆ, ತಾಳಿಕೋಟೆ,
ಬಿಜಾಪುರ ಜಿಲ್ಲೆ.

# ಶಿವಕುಮಾರಸ್ವಾಮಿ ವಿಶ್ವಸಂಸಾರಿ

ಚಿಕ್ಕಂದಿನಿಂದ ನೋಡುತ್ತಿದ್ದೇನೆ
ಶಾಲೆಯಲಿ ಓದಿ, ಜಾತ್ರೆಯಲಿ ಎತ್ತುಗಳ
ಕೊಂಡು ಮಾರಿದ್ದೇನೆ. ಹೀಗಾಗಿ
ಇಂಚಿಂಚು ಪರಿಚಿತವು ಸಿದ್ಧಗಂಗೆ.

ಬಹುದಿನದ ಮೇಲೀಗ ಇದ್ದಕ್ಕಿದ್ದಂತೆ
ಹೋಗಿ ನೋಡಿದರೆ
ಒಂದೇ ಒಂದು ವೃಕ್ಷದ ಕೂದಲೆಳೆ ಕೊಂಕಿಲ್ಲ
ಸನಿವಾಸ ವಿದ್ಯಾರ್ಥಿ ನಿಲಯಗಳು ಏಳುತಿವೆ
ಕರೆ ಕರೆದು ಕರುಣೆ ಹಾಲು.

ವಿದ್ಯಾ ಮಂದಿರಗಳಾಳದ ಸಿರಿಗೆ
ಕೈಹಿಕ್ಕಿಹವು
ಬೆಟ್ಟದ ಬುಡದಲ್ಲಿ ಬೆಟ್ಟದಂತಹ ಬದುಕು
ಎತ್ತ ನೋಡಿದರತ್ತ ಮಹಮನೆಯ ವಹಿವಾಟು.

ಪಟ್ಟದಲಿ ಬೈರಾಗಿ ನಿತ್ಯವ್ಯವಹಾರದಲಿ
ವಿಶ್ವ ಸಂಸಾರಿ.
ಎಂಭತ್ತೆಂಟರ ಹರೆಯಕ್ಕೆ ಕಾಲಿಟ್ಟ
ಶಿವಕುಮಾರಸ್ವಾಮಿ
ಹೊರೆ ಹೊತ್ತು ಹೊತ್ತು ಬೆನ್ನು ಬಾಗಿದ ನಿನಗೆ
ಸಾಷ್ಟಾಂಗವೆರಗಿದರೆ
ತನ್ನ ಸೌಭಾಗ್ಯಕ್ಕೆ ತಾನೆ ನಗುವಳು ಭೂಮಿ.

ಮಂದ ಮಾರುತನ ಅಂತಃಕರಣ ಸಾಗರಕೆ
ಶ್ರಾವಣದ ಮಳೆಗೆ ಉಕ್ಕಿದ ಮುಗಳ್ನಗೆಗೆ
ನೀಳ ಬಾನೊಡಲಿಂದ ಇಳೆಗಿಳಿದ ತಿಳಿ ಬೆಳಕಿಗೆ.
ತನ್ನ ಸೌಭಾಗ್ಯಕ್ಕೆ ತಾನೆ ನಗುವಳು ಭೂಮಿ.

–ವೀಚಿ

# ಬಸವ ಜ್ಯೋತಿಗೆ ತೈಲವಾದವರು

ಪ್ರತಿಯೊಬ್ಬ ಮಹಾವ್ಯಕ್ತಿಗಳ ಜೀವನದ ಹಿಂದೆ ಸ್ತ್ರೀಯೊಬ್ಬಳ ಸಹಕಾರ ಅವಿರತ ಶ್ರಮ, ತ್ಯಾಗ, ನಿರಂತರ ಹೋರಾಟ ಹಾರೈಕೆ ಇದ್ದೇ ಇರುತ್ತದೆ. ಆಕೆ ತಾಯಿಯಾಗಿಯೋ ಸೋದರಿಯಾಗಿಯೋ, ಪತ್ನಿಯಾಗಿಯೋ, ತನ್ನೊಡಲ ಕುಡಿಯನ್ನು ಒಡಹುಟ್ಟಿದವರನ್ನೊ, ಕೈಹಿಡಿದವನನ್ನೂ ಉದ್ಧರಿಸಿರುವುದನ್ನು ಕಾಣುತ್ತೇವೆ. ಅಂತೆ ನಾಡಿನ ಅಂಧಕಾರವನ್ನು ಕಳೆದ ದೇದಿಪ್ಯ ಅರ್ತವಾದ ಬಸವಣ್ಣ ವಿಶ್ವದಾದ್ಯಂತ ಪ್ರಜ್ವಲಿಸಿ ಬೆಳಗಲು ತಮ್ಮ ಜೀವನವನ್ನು ಧಾರೆಯೆರೆದವರು. ಅವರ ಸೋದರಿ ಮತ್ತು ಪತ್ನಿಯರು ಎಂಬುದನ್ನು ಮರೆಯುವಂತಿಲ್ಲ.

ಬಸವಣ್ಣನವರ ಜೀವನದ ಪ್ರಾರಂಭದಿಂದ ಅಂತ್ಯದವರೆಗೂ ಈ ಚೇತನಗಳ ಸಹಕಾರ ಅವಿರತಶ್ರಮ ಕಾರ್ಯ ನಿರ್ವಹಿಸಿದ್ದನ್ನು ಕಾಣುತ್ತೇವೆ. ಆ ಚೇತನ ದೇದಿಪ್ಯರಾಗಿ ಪ್ರಕಾಶಿಸಲು ಬೇಕಾದ ವಾತಾವರಣ ಸೃಷ್ಟಿಸಿದ ಅಕ್ಕನಾಗಮ್ಮ ಕಂಗಳೆರಡಂತಿದ್ದ ಆಧ್ಯಾತ್ಮದೀವಿಗೆಗಳಾದ ನೀಲಾಂಬಿಕೆ ಗಂಗಾಂಬೆಯರ ತ್ಯಾಗದ ಫಲ ಜಗಜ್ಯೋತಿಯಾ ಬೆಳಗಲು ಸಾಧ್ಯವಾಯಿತು. ಅವರೆಲ್ಲ ಆ ಜ್ಯೋತಿಗೆ ಬತ್ತಿಯಾದರು, ತೈಲವಾದರು.

ಬಸವನೇ ಮುಖ ಸೆಜ್ಜೆ
ಬಸವನೇ ಅಮಳೋತ್ಕ
ಬಸವನ ನಾನೆತ್ತಿ ಮುದ್ದಾಡುವೆನಯ್ಯ

ಎಂದು ಹೇಳುತ್ತಾ ಸೋದರನ ಬೆಂಗಾವಲಾಗಿ ನಿಂತ ಸೋದರಿ ನಾಗಲಾಂಬಿಕೆ ತಾಯಿಗಿಂತ ಹೆಚ್ಚಾಗಿ ಅವಳು ಕ್ರಾಂತಿಯ ಕಿಡಿಯಾಗಿ ಬೆಳೆಯಲು ಬೇಕಾದ ರಕ್ಷಣೆ ನೀಡುತ್ತ ಬೆಳೆಸಿದಳು. ಅಂತೆ ಆ ಕಿಡಿ ಉಪನಯನ ಪ್ರತಿಭಟಿಸುವಷ್ಟು ಯೋಚಿಸಿದ್ದು ಅಕ್ಕನ ಮೇಲಿನ ಅಭಿಮಾನದಿಂದಲೇ. ಅಕ್ಕನಿಗೆ ಇಲ್ಲದ್ದು ತನಗೆಬೇಡ. ಎಂದು ಹಿಡಿದದ್ದು ಆಕೆಯ ಮೇಲಿನ ವಾತ್ಸಲ್ಯದಿಂದಲೇ. ಮುಂದೆ ಅದು ಹೆಮ್ಮರವಾಗಿ ಬೆಳೆಯುತ್ತದೆ. ಆಕೆಗೂ ಸೋದರನೇ ಕಣ್ಬೆಳಕು. ಆ ಬೆಳಕು ಪ್ರಜ್ವಲಿಸಲು ಬೇಕಾದ ವಾತಾವರಣ ಸೃಷ್ಟಿಸಿದಳು. ಬಾಲ ಬಸವನನ್ನು ವೈಚಾರಿಕ ಚಿಂತಕನ್ನಾಗಿಸಲು ಸಹಕಾರಿ ಆದಳು. ಮಾನವೀಯ ಮೌಲ್ಯಗಳ ಬೀಜ ಬಿತ್ತಿದಳು. ಪುರಾತನರ ಶರಣರ ಕಥೆಗಳನ್ನು ಹೇಳುತ್ತ ಕಾಯ ಸಹಿತ ಕೈಲಾಸಕ್ಕೆ ಹೋದ ಶರಣರ ಬಗ್ಗೆ ತಿಳಿಸಿದ್ದಲ್ಲಿದೆ. ಈ ಬುವಿಯನ್ನು ಕೈಲಾಸವಾಗಿಸುವ ಬಗೆ ಅರುಹುತ್ತ ಅಹರ್ನಿಶಿ ಆತನ ಏಳ್ಗೆಗೆ ಶ್ರಮಿಸಿದಳು.

ಕಲ್ಯಾಣದಲ್ಲೂ ಅಣ್ಣನ ಬೃಹತ್ ಕಾರ್ಯಾಲೋಚನೆಗೆ ಬೆಂಗಾವಲಾಗಿ ನಿಂತಳು. ಮಹಾಮನೆಯ ಕೀರ್ತಿ ಧವಳ ಪಸರಿಸಲು ಕಾರಣಳಾದಳು. ಶರಣ ರಕ್ಷಣೆಯ ಭಾರ ಅವಳಪಾಲಿನದಾಯ್ತು.

ಕಲ್ಯಾಣ ಕ್ರಾಂತಿ ಧರೆಹತ್ತಿ ಉರಿದಾಗ ಸಾಕುಮಾಡೈತಂದೆ ಲೋಕದಾಟವ
ನ್ನು. ತೆರಫುಕೊಂಡು ತಂದೆ ಬಂದಿಹೆನುನೊಂದೆಂದು ಹೇಳುತ್ತ ಕೂಡಲಿಗೆಗೆ ಅಣ್ಣ
ಳಿದಾಗ ಶರಣ ರಕ್ಷಣೆಯ ಹೊರೆ ಹೊತ್ತವಳು. ದೃತಿಗೆಡದೆ ಶರಣ ಸಂಸ್ಕೃತಿಯ
ಕ್ಷಿಸಿದವಳು. ಅಂದವಳ ತ್ಯಾಗ ವೀರತ್ವದ ಥಲ ಇಂದಿರುವ ವಚನಗಳು. ಬಿಜ್ಜಳನ
ನ್ಯದೊಡನೆ ವೀರಾವೇಶದಿಂದ ಹೋರಾಡುತ್ತಾ ಬಸವ ಸಂಸ್ಕೃತಿಯ ಉಳಿವಿಗೆ ತನ್ನ
ರ್ಪಿಸಿದಳು.

ಸೋದರನ ಬಗ್ಗೆ ಆಕೆಯ ವಾತ್ಸಲ್ಯ ಮೇರುವಿಗೂಮಿಗಿಲು ಅಣ್ಣ ನಿರ್ವಯ
ಾಗ ಅವಳ ನೋವ ಹೇಳತೀರದು.

> ಅಯ್ಯ ನಾನಥವೆಯಯ್ಯಾ
> ಎನ್ನ ಕೈಯ್ಯ ಕೋಲ ಕೊಂಬರೆ
> ಎಳಗರುವ ನೆಳಗಂತಿಯನೆಳದೊಯ್ಯರೆ

ಎಂದುದಲ್ಲದೆ ಎನ್ನನೊಯ್ಯದೆ ಹೋದಿರಲ್ಲ ಬಸವಾ ಎಂದು ಆಕೆಯ ಅಳಲಿಕೆ
ೋಡಿದಾಗ ಅವರೀರ್ವರ ಅನ್ಯೋನ್ಯತೆ ಅರಿವಾಗದು. ಬಸವಣ್ಣ ಉತ್ತುಂಗ ಶಿಖರ
ೇರಿದ್ದನ್ನು ನೋಡಿಪಳು. ಅಂತೆ ಆಧಿಮಾರ್ಕ ಅಸ್ತಮಿಸಿದ್ದನ್ನು ಕಂಡಳು. ಅಣ್ಣನನ್ನು
ಮಗುವಾಗಿ ಕಂಡಳು. ಮಾತೆಯಾಗಿ ಬೆಳಸಿದಳು. ಗುರುವಾಗಿ ಶಿಕ್ಷಣವಿತ್ತಳು. ಅಣ್ಣ
ನ್ನ ಗುರುವಾಗಿ ಪಡೆದಳು. ಅ ನಿಲವನ್ನು ಅಣ್ಣ ಪಡೆವಂತೆಸಗಿದಳು. ಇಂಥ
ೋದರತೆ ಜಗತ್ತಿನಲ್ಲಿ ಅತ್ಯಾಶ್ಚರ್ಯ. ಸ್ವಾರ್ಥಕ್ಕೆ ಪಕ್ಕಾಗಿರುವ ಈ ಜಗತ್ತಿನಲ್ಲಿ
ಾವಾತ್ಸಲ್ಯ ಇಂಥ ಸಾಧನೆ ಆಶ್ಚರ್ಯ. ಏನೆ ಇರಲಿ ಬಸವ ಜ್ಯೋತಿಗೆ ಅಕ್ಕ ತೈಲವಾದ
ಬುದನ್ನು ಮರೆಯುವಂತಿಲ್ಲ.

ಅಕ್ಕನಾಗಮ್ಮನಲ್ಲದೆ ಬಸವಣ್ಣನ ಕೀರ್ತಿ ಕೇತನ ಎಲ್ಲೆಡೆ ಪ್ರಜ್ವಲಿಸಲು
ರಣರಾದ ಅವರ ಪತ್ನಿಯರೀರ್ವರನ್ನು ಮರೆಯುವಂತಿಲ್ಲ. ಇಂಥ ಪತ್ನಿಯರು
ಾರೆತಿದ್ದರಿಂದಲೆ "ಸತಿಪತಿಯರೊಂದಾದ ಭಕ್ತಿ ಹಿತವಾಗಿಪ್ಪದು ಶಿವಂಗೆ"–ಎಂಬ
ಣಿ ಮೊಳಗಿದುದು ಈರ್ವರ ಶ್ರೀಮಂತಿಕೆಯ ಮಡಿಲಲ್ಲಿ ಬೆಳೆದವರು. ಐಹಿಕ
ಪತ್ತಿಗೆ ಆಶಿಸದೆ ಅಣ್ಣನ ಕಣ್ಬೆಳಕಾಗಿ ನಿಂತವರು. ಮಹಾಮನೆಯ ಶರಣತಿಂಥಿಣಿಯ
ಧಕರ ಸಾಧನೆಗೆ ಅಹರ್ನಿಶಿ ಶ್ರಮಿಸಿದರು. ಗಂಗಾಂಬೆ ಅಣ್ಣನಿಗೆ ತೆರೆಯ ಹಿಂದೆ
ಂತು ಸಹಕರಿಸಿದ ವೀರವನಿತೆ. ಆದರಲ್ಲಿ ಕಲ್ಯಾಣಕ್ರಾಂತಿಯ ಸಮಯ ಶರಣ
ಣೆ ಹೊಣೆ ಜೊತೆಗೆ ಸಂಸ್ಕೃತಿಯ ವಾಹಿನಿಯಾದ ವಚನ ಸಾಹಿತ್ಯದ ರಕ್ಷಣೆಗಾಗಿ
ಕ್ಕನಾಗಮ್ಮನೊಡನೆ, ಸಹಕರಿಸಿ ಯುದ್ಧ ಮಾಡುತ್ತ ಶಿವನಲ್ಲಿ ಸಂದವಳು.

ಗಂಗಾಂಬೆಯ ತ್ಯಾಗದ ಫಲವೇ ನೀಲಾಲೋಚನೆ ಎನ್ನಬಹುದು 'ಪೃಥ್ವಿ
ಗಗ್ಗಳದ ಚೆಲುವ ಎನ್ನ ಸತಿ ನೀಲಾಲೋಚನೆ' ಎಂಬ ಅಣ್ಣನ ಅಭಿಮಾನ
ಪಾತ್ರಳಾದವಳು. ಕೇವಲ ಬಾಹ್ಯ ಸೌಂದರ್ಯವಲ್ಲ ಆಂತರಿಕ ಸೌಂದರ್ಯವಿದ್ದುದರಿಂದ
ಕನ್ನಡಿಗೆ ಸುವರ್ಣದ ಚೌಕಟ್ಟಿನಂತೆ ಕಂಗೊಳಿಸಿದಳು. ಅಣ್ಣನ ಬಾಳ ದೀಪ್ತಿ ಇವ
ಪತಿಯ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನಡೆದವಳು. ಕಳ್ಳ ಆಭರಣವ ಕಳಲು ಬ
ಪತಿಯ ನುಡಿ ಕೇಳಿ ಅದನಿತ್ತು ಅನುಭಾವಸಾಭರಣದಿಂ ಅನುಭಾವದಿಂ, ಅಲಂಕಾ
ನಾಚರಣೆಗೆ ತಂದವಳು. ಅವರೀರ್ವರ ನಿಲವನ್ನು ಆಕೆಯ ವಚನದಲ್ಲಿ ಕೇಳಬೇಕ

ಮಡದಿ ಎನಲಾಗದು ಬಸವಂಗೆ ಎನ್ನನ್ನು
ಪುರುಷ ಎನಲಾಗದು ಬಸವಯ್ಯ ಎನಗೆ

ಉಭಯವನ್ನು ಅಳಿದಿದ್ದರಂತೆ ಏನು ಹೇಳದೆ ಅಣ್ಣ ಕೂಡಲಿಗೆಗೆ ತೆರಳಿ ನೀಲಾಲೋ
ಚನೆಯ ನೆನಪಾಗಿ ಕರೆತರಲು ಕಳಿಸಿದ. ಅಲ್ಲಿರ್ಪ ಸಂಗಯ್ಯ ಇಲ್ಲಿಲ್ಲವೆ? ಎಂ
ಹೇಳಿ ಅಣ್ಣನ ಕ್ಷಣಿಕ ಇರವೆಯನ್ನು ಹೋಗಲಾಡಿಸಿ ಇದ್ದಲ್ಲಿಯೆ ಸಂಗನನು ಕಾ
ಪರಿ ತಿಳಿಸಿ ಬಸವನಲ್ಲಿ ಸಂಗನನು ಕಂಡವಳು. ಬಸವಣ್ಣನಿಗೆ ಅರಿವಿತ್ತಳು. ಅಡಿಯ

ಅಡಿಯಿಟ್ಟಳು. ಅವನಿಗೆ ಬೆಂಗಾವಲಾಗಿ ನಿಂತಳು.

ಇಂದಿಂಥ ಮನೋಬಾವ ಎಲ್ಲಿ ಬರಬೇಕು ನಮ್ಮ ಹೆಣ್ಣುಮಕ್ಕಳಿಗೆ ಪತಿಯ
ಸಾಧನೆಗೆ ಸಹಕಾರಿಯಾದವರೆಷ್ಟು ಮುಂದಿಇದ್ದಾರೆ. ಒಂದೆಡೆ ದಾಸರು ಹೀಗೆಹೇಳುತ್ತಾ

ತಂದು ಬಂದರೆ ತನ್ನ ಪತಿಯೊಳು
ಬಂದಿರಾ? ಬಳಲಿದಿರಾ? ಎಂಬಳು
ಒಂದು ನಿಮಿಷವು ತಾರದಿದ್ದರೆ
ಹಂದಿನಾಯಂತೆ ಬಗಳ್ವಳು; ಎಂಥ ಚಿತ್ರ ನೋಡಿ

ಪತಿ ಲಂಚ ತರಲು ಪ್ರೋತ್ಸಾಹಿಸಿ ಅವನ ಮನದ ಅಶಾಂತಿಗೆ ಕಾರಣಳಾದವಳು
ಅತೃಪ್ತಿಯಿಂದ ತೊಳಲುತ್ತ ಸ್ವಾರ್ಥಾಲೋಚನೆಯಿಂದ ಕೂಡಿ ಸುತ್ತ ಪರಿಸರದ
ಕಲುಷಿತಗೆ ಕಾರಣಳಾಗುವ ಎಷ್ಟು ಹೆಣ್ಣು ಮಕ್ಕಳಿಂದಿಲ್ಲ.

ಆದರೆ ಈ ಹೆಣ್ಣಿನ ತ್ಯಾಗ, ನಿಸ್ವಾರ್ಥತೆಯ ನಿರಾಶೆಯ ಫಲವಾಗಿ ಅಣ್ಣ
ಚಿರಸ್ಥಾಯಿಯಾಗಲು ಸಾಧ್ಯವಾಯಿತು.ಅಂಥ ಅಲ್ಲಿ ವಿವರವಾಗಿ ಆಲೋಚಿಸಲು
ಅಂದರೆ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ., ಸಾಹಿತ್ಯಿಕವಾಗಿ ಆತ
ದೈತ್ಯ ಹೆಜ್ಜೆಯಿಡಲು ಸಾಧ್ಯವಾಯಿತು. ಈ ಕಲ್ಯಾಣದ ಹಣತೆ ದೇದಿಪ್ಯವಾಗಿ ಪ್ರಜ್ವಲಿ
ಸಲು ತಾವೇ ಬತ್ತಿಯಾದರು ತೈಲವಾದರು ಎಂಬುದರಲ್ಲಿ ಸಂಶಯವಿಲ್ಲ.

—ರಾಜೇಂದ್ರಶಿಶು
242, ಉತ್ತರಾದಿಮಠದ ರಸ್ತೆ, ಮೈಸೂರು-4

# ಬಸವಣ್ಣನವರು ಮಾಡಿದ ಸಾಮಾಜಿಕ ಕ್ರಾಂತಿ

ಧರ್ಮವು ಜಾತಿಯಾಗಿ ಮಾರ್ಪಟ್ಟಾಗ ಸ್ವಾರ್ಥನಿಂದೆಗಳು ಬೆಳೆಯುತ್ತವೆ, ಜ್ಞಾನವು ತಾಂಡವಾಡುವಾಗ ಮಾನವ ದಾನವನಾಗುತ್ತಾನೆ. ಆಚಾರವು ನಾಚಾರವಾದರೆ ಅಸುರಿಭಾವನೆಗಳು ಬೆಳೆಯುತ್ತವೆ. ಅಂದು ಹೀಗೆ ಸಾಮಾಜದ ಸ್ಥಾನ ದಿನೇ ದಿನೇ ಹದಗೆಡುತ್ತಲಿದ್ದಾಗ ಅಣ್ಣ ಬಸವಣ್ಣನವರು ಅವತಾರ ಪುರುಷರಾಗಿ ಉದಯಿಸಿ ಬಂದರು. ಧರ್ಮದ ಜಾಗೃತಿಯನ್ನುಂಟು ಮಾಡಿದರು. ಮಾನವತೆಯನ್ನು ಎತ್ತಿ ಹಿಡಿದರು. ಸಮಗ್ರ ಮಾನವ ಕಲ್ಯಾಣವೇ ಅವರ ಗುರಿಯಾಗಿತ್ತು, ಸುಖಿ ಸಮಾಜ ಕಟ್ಟಿ ಜನರಲ್ಲಿ ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಸಮಾನತೆಯನ್ನು ಸಾಧಿಸಬೇಕೆಂಬ ಮಹೋದ್ದೇಶವನ್ನು ಹೊಂದಿ ಕಾರ್ಯಪ್ರವೃತ್ತರಾಗಿ ಹಗಲಿರುಳು ಚಿಂತಿಸಿ ಸಫಲತೆಯನ್ನು ಸಾಧಿಸಿದರು. ಸಕಲ ಜೀವರಾಶಿಗಳಿಗೂ ಲೇಸನ್ನೇ ಬಯಸಿ ಸ್ತ್ರೀ ಸಮಾನತೆ, ಅಂತರ್ಜಾತಿಯ ಸಂಬಂಧ ಕಾಯಕ ತತ್ವ ಮೊದಲಾದ ಉದಾತ್ತ ತತ್ವಗಳನ್ನೊಳಗೊಂಡು ಎಲ್ಲಾ ವರ್ಗದ ಪಂಗಡ ಜನಗಳಿಗೆ ಪ್ರಜಾಪ್ರಭುತ್ವದ ಮೂಲ ತತ್ವದ ತಳಹದಿಯ ಮೇಲೆ ಅನುಭವ ಮಂಟಪದ ಮೂಲಕ ಆಶ್ರಯ ನೀಡಿದರು.

ಸಮಾಜದ ಸರ್ವ ರಂಗದಲ್ಲಿ ವಿಚಾರಕ್ರಾಂತಿಗೈದ ಬಸವಣ್ಣನವರು ಹೊಸ ಸಮಾಜ ರಚನೆಗೆ ರೂವಾರಿಯಾದರು. ಜಡ್ಡುಗಟ್ಟಿದ ಗೊಡ್ಡು ಸಂಪ್ರದಾಯಗಳನ್ನು ತನ್ನ ಕ್ರಾಂತಿಕಾರಿ ವಿಚಾರಗಳಿಂದ ಉಚ್ಚ ಸಮಾಜಕ್ಕೆ ಹೊಸ ಹೊಳಪನ್ನು ಕೊಟ್ಟರು. ಸಮಾಜವನ್ನು ಶುದ್ಧೀಕರಿಸಿ ನವಸಮಾಜ ಕಟ್ಟಿದ ಬಸವಣ್ಣನವರ ಘನ ಉದ್ದೇಶ ಸಮಾಜ ಬದುಕೆನ್ನುವುದು, ಅದು ಬದುಕಲು ಬೇಕಾಗುವಂತಹ ಪರಿಸರ, ಸನ್ನಿವೇಶ ಸಾಮುಗ್ರಿಗಳನ್ನು ಅಣ್ಣನವರು ಸಮಾಜಕ್ಕೆ ಒದಗಿಸಿದ ಅಂತಹ ಹಲವಾರು ವಿಚಾರಗಳಲ್ಲಿ ಸಾಮಾಜಿಕ ಕ್ರಾಂತಿಯು ಒಂದು.

ಬಸವಣ್ಣನವರು ದಯೆ, ಧರ್ಮ, ವಿಶ್ವಬಂಧುತ್ವದ ವಿಶಾಲಭಾವನೆಯ ಹಿನ್ನೆಲೆಯಲ್ಲಿ ಮಾನವ ಸಮಾಜ ಕಟ್ಟಲು ಯತ್ನಿಸಿದರು. ವಿಚಾರ ಕ್ರಾಂತಿಗೈದರು. "ದಯುವೇ ಧರ್ಮದ ಮೂಲವೆಂದು" ನಿಜ ಧರ್ಮದ ತಿರುಳನ್ನು ತಿಳಿಸಿದರು. ಆಡಂಬರಕ್ಕಿಂತ ಅಂತರಂಗ ಶುದ್ಧಿಗೆ, ಜಪತಪಗಳಿಗಿಂತ ನಿಶ್ಚಲ ಭಕ್ತಿಗೆ ಭಗವಂತ ಒಲಿಮೆಯಾಗುವದೆಂದೂ "ಸತ್ಯ ನುಡಿಯುವುದೇ ದೇವಲೋಕ ಮಿಥ್ಯವ ನುಡಿಯುವುದೇ ಮೃತ್ಯರ್ಲೋಕ" "ಆಚಾರವೇ ಸ್ವರ್ಗ ಅನಾಚಾರವೇ ನರಕ" ಎಂದು ಬೋಧಿಸಿ ಇಹಪರಗಳೆರಡರ ಅಂತರವನ್ನು ಹೋಗಲಾಡಿಸಿದರು. ಬತ್ತುವ ತೊರೆ, ಒಣಗುವ

ಮರ ಪ್ರಸಂಗ ಬಂದರೆ ಮಾರುವ ದೇವರ ಮೂರ್ತಿಗಳು ದೇವರಲ್ಲ ಎಂದು
ಒತ್ತಿ ಹೇಳಿದರು. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು ಎಂದು ಅರುಹಿ
ಸಂಸಾರದಲ್ಲಿದ್ದುಕೊಂಡು ಸದ್ಗತಿ ದೊರಕಿಸಿಕೊಳ್ಳುವ ಸುವರ್ಣ ಮಾರ್ಗ ತೋರಿಸಿದರು.
"ಸದುವಿನಯವೇ ಸದಾಶಿವನೊಲುಮೆ" ಎಂದು ಸಾರಿ ಮೇಲು ಕೀಳು ಎನ್ನದೆ
ಸರ್ವರಿಗೂ ಧರ್ಮದ ಬಾಗಿಲನ್ನು ತೆಗೆದಿಟ್ಟರು. ಬಸವಣ್ಣನವರ ಧಾರ್ಮಿಕ ವಿಮೋಚನೆಯು
ಅಂಧಶ್ರದ್ಧೆಗೆ ಅವಕಾಶ ಕೊಟ್ಟವರಲ್ಲಿ; ನೇರವಾಗಿ ತಮ್ಮ ಅರಿವಿಗೆ ಮತ್ತು ಅನುಭವಕ್ಕೆ
ಬಾರದ ಅವರ ಮನ ಒಪ್ಪುತ್ತಿರಲಿಲ್ಲ. ಧರ್ಮದ ಹೆಸರಿನಲ್ಲಿ ಬೆಳೆದು ಬಂದಿರುವ
ವ್ಯರ್ಥ ಅಚಾರಗಳನ್ನು ಕಟುವಾಗಿ ಖಂಡಿಸಿದ್ದಾರೆ. ಯಾವುದನ್ನು ನುಡಿಯಲ್ಲಿ ಹೇಳಿ
ದರೊ ಆದನ್ನು ನಡೆಯಲ್ಲಿ ತಂದು ತೋರಿಸಿದರು. ಜನಸಾಮಾನ್ಯರಲ್ಲಿ ಬೇರೂರಿದ್ದ
ಅಂಧಶ್ರದ್ಧೆಯ ತೊಡಕನ್ನು ಕಿತ್ತೆಸೆಯಲು ಬಸವಣ್ಣನವರು ಅತ್ಯಂತ ಯಶಸ್ವಿಯಾದರು.
ಸಾವಿರಾರು ದೇವರುಗಳ ಜಂಜಾಟದ ಹೊರೆಯನ್ನಳಿಸಿ "ಇಬ್ಬರು ಮೂರು ದೇವರೆಂದು
ಉಬ್ಬುಬ್ಬಿ ಮಾತನಾಡಬೇಡ ಒಬ್ಬನೆ ದೇವನೊಬ್ಬ ಕಾಣಿರೋ" ಎಂದು ಹೇಳಿ ಏಕದೇ
ವೋಪಾಸನೆಯ ಕಡೆಗೆ ಮನಸ್ಸೆಳೆದರು. ಸಮಾಜದ ಕುರುಡು ನಂಬಿಕೆಯುಳ್ಳ ಜನರ
ಬಳಕೆಯ ಮಾರಮ್ಮ' ಕರಮ್ಮ ಕಾಳಮ್ಮ ಹಾಗೂ ಭರಮಪ್ಪ ಮೊದಲಾದ ತಾಮಸ
ದೈವಗಳನ್ನು ಬಸವಣ್ಣನವರು ಕಟುವಾಗಿ ಖಂಡಿಸಿದರು.

ಮಾರಿ ಮಸಣಿ ಎಂಬವು ಬೇರಿಲ್ಲ ಕಾಣಿರೋ
ಮಾರಿ ಎಂಬುದೇನೋ?
ಕಂಗಳು ತಪ್ಪಿನೋಡಿದರೆ ಮಾರಿ
ನಮ್ಮ ಕೂಡಲ ಸಂಗಯ್ಯನ ನೆನಹ ಮರೆದರೆ ಮಾರಿ
ಎಂದು ಮಾರಿಯನ್ನು ಅರ್ಥೈಸಿದ್ದಾರೆ.

ಹೀಗೆ ಮೂಢ ನಂಬಿಕೆಗಳಿಗೆ ಬಲಿಯಾದ ಜನ ಅನೇಕ ವಿಧವಾಗಿ ಮೋಸ
ಹೋಗುತ್ತಾರೆ. ದೆವ್ವಗಳ ಬಿಡಿಸುವ ನೆಪದಲ್ಲಿ ಹೆಣ್ಣುಗಳ ಮಾನಾಪಹರಣ ಅವರ
ಮನೆಯವರ ಶೋಷಣೆ ಶಾಸ್ತ್ರ ಹೇಳುವವರು ನೆಲದಲ್ಲಿ ನಿಧಿ ತೋರಿಸುತ್ತೇನೆ ಎಂದು
ಎಂದು ಮೋಸ ಮಾಡುವುದು, ಬೆತ್ತಲೆ ಸೇವೆ ದೇವರ ಹೆಸರಿನಲ್ಲಿ ಭಿಕ್ಷೆ ಬೇಡುವವರು
ಹೀಗೆ ಹಲವು ಬಗೆಯಾಗಿ ವಂಚಿಸುವ ಜನರು ಯಾವ ಕಾಲಕ್ಕೂ ಕಾಣಸಿಗುತ್ತಾರೆ.
ದೇವರ ಹೆಸರಿನಲ್ಲಿ ನಡೆಯುವ ಅವ್ಯವಹಾರ ಅನ್ಯಾಯಗಳನ್ನು ತಪ್ಪಿಸುವುದರ
ಸಲುವಾಗಿ ಪೂಜಾರಿಗಳ ಕಪಿ ಮುಷ್ಠಿಯಲ್ಲಿ ಸಿಕ್ಕು ಒದ್ದಾಡುವ ಭಕ್ತರನ್ನು ಕಂಡು
ತನ್ನಲ್ಲಿಯೇ ದೇವರನ್ನು ಕಾಣುವ ಆಧ್ಯಾತ್ಮದ ಉದಾತ್ತ ತತ್ವಗಳನ್ನು ಆಚರಣೆಯಲ್ಲಿ
ತಂದು ತೋರಿಸಿದರು. ಬಸವಣ್ಣನವರು ಧಾರ್ಮಿಕ ರಂಗದಲ್ಲಿ ಬಸವಣ್ಣನವರು ದೇವರು
ಭಕ್ತರ ನಡುವೆಯ ಶೋಷಣೆಯನ್ನು ತಪ್ಪಿಸಿದರು. ಹಿಂಸೆಯನ್ನು ಯಾವುದೇ ಕಾರಣ

ಗಲಿ ಅವರು ಒಪ್ಪಲಿಲ್ಲ. ಜಗವೆಲ್ಲಾ ಪರಮಾತ್ಮನೆ ಆಗಿರುವಾಗ ಅದು ಆತ್ಮ
ಸೆ ಆಗುತ್ತದೆ; ಎಂದು ತಿಳಿಸಿದರು. ಒಬ್ಬರ ಮನನೋಯಿಸಿ ಒಬ್ಬರ ಮನೆಯ
ತವ ಮಾಡಿ ಗಂಗೆಯಲ್ಲಿ ಮುಳಗಿದರೆ ಆಗುವುದೇನಯ್ಯ ಎಂದು ತಿಳಿಸಿ ಅಹಿಂಸೆಯ
ಹತ್ವವನ್ನು ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ಪಲಿಂಗ ಘಟ
ರ್ಪದಂತೆ "ಎನ್ನುವಲ್ಲಿ ಸತ್ಯ ಮಹತ್ವವನ್ನು ಎತ್ತಿ ತೋರಿಸಿದ್ದಾರೆ. ಹೀಗೆ ಸಾಮಾಜಿ
ಾಗಿ, ರಾಜಕೀಯವಾಗಿ ಆರ್ಥಿಕವಾಗಿ, ಧಾರ್ಮಿಕವಾಗಿ ಯಾವುದೇ ರೀತಿ
ಂದಲೂ ವ್ಯಕ್ತಿಯ ಶೋಷಣೆಗೆ ಅವಕಾಶವಿಲ್ಲದ ರೀತಿಯಲ್ಲಿ ತಳಹದಿ ಹಾಕಿ
ಮಾಜ ರಚನೆಯನ್ನು ಅಮೂಲಾಗ್ರವಾಗಿ ಮಾರ್ಪಡಿಸಿ ವ್ಯಕ್ತಿ ಮೌಲ್ಯಗಳಿಗೆ ವಿಶೇಷ
ಬೆಯನ್ನು ಕೊಡುವ ಹಾಗೆ ಸಮಾಜದ ರಚನೆಗೆ ಹೊಸ ಕ್ರಾಂತಿ ಮಾಡಿದ
ಯಸ್ಸು ಬಸವಣ್ಣನವರದು.

ಬಸವಣ್ಣನವರು ಸಮಗ್ರವಾಗಿ ಸಾಮಾಜಿಕ ಕ್ರಾಂತಿ ನಡೆಸಿದರು. ಸಮಾನತೆಯ
ೀಲೆ ಅತ ನವ ಸಮಾಜ ಕಟ್ಟಲು ಯತ್ನಿಸಿದರು. ವಿಪ್ರ ಮೊದಲು ಅಂತ್ಯಜ ಕಡೆ
ಾಗಿ ಶಿವಭಕ್ತರಾದವರನ್ನೆಲ್ಲಾ ಒಂದೆ ಎಂಬಿ "ಈ ನುಡಿದ ನುಡಿಯೊಳಗೆ ಎಳ್ಳ
ನೆಯಷ್ಟು ಕೂಡಲ ಸಂಗಮ ದೇವಾ" "ಅಂಗದ ಮೇಲೆ ಲಿಂಗವಿದ್ದವರೆಲ್ಲರನ್ನು
ಗಮನಾಥ"ನೆಂದು ಬಸವಣ್ಣನವರು ಭಾವಿಸಿದರು.

ಲಿಂಗ ಸಂಸ್ಕಾರದ ಬಳಿಕ ವಿಪ್ರವಿಪ್ರನಾಗಿ ಉಳಿಯಲ್ಲಿಲ್ಲ. ಅದೇ ರೀತಿ ಅಂತ್ಯಜ
ಂತ್ಯಜನಾಗಿ ಉಳಿಯಲಿಲ್ಲ. ಅವರೆಲ್ಲ ಶಿವಭಕ್ತರಾದರು. ಸರಿಸಮನರಾದರು. ಅವರಲ್ಲಿ
ಸ ಭೋಜನ ಸಹ ಬಳಕೆ ನಡೆಯಿತು. ಭಾರತದ ಇತಿಹಾಸದಲ್ಲಿ ಆರ್ಯರು
ಮಾಜವನ್ನು ಚತುರ್ವರ್ಣದಲ್ಲಿ ಒಡೆದುದನ್ನು ಬಸವಣ್ಣನವರು ಹನ್ನೆರಡನೆಯ ಶತಮಾ
ದಲ್ಲಿ ಲಿಂಗಸಂಸ್ಕಾರದ ಮೂಲಕ ಒಗ್ಗೂಡಿಸಿದರು. ಹೀಗೆ ಕುಲಛಲಗಳನ್ನು ಖಂಡಿಸಿ
ು. "ಕೊಲ್ಲುವವನೇ ಮಾದಿಗ ಹೊಲಸು ತಿನ್ನುವವನೇ ಹೊಲೆಯ" ಎಂದು ಉಸಿರಿ
ು. ಬಸವಣ್ಣನವರ ಈ ವಾಣಿಯ ವಜ್ರಾ ಘಾತಕ್ಕೆ ಅವರ ವಿಚಾರ ಕ್ರಾಂತಿಗೆ
ತಿಯ ಜಾಡ್ಯದ ಕೋಟೆ ತತ್ತರಿಸಿತ್ತು. ಹುಟ್ಟನಿಂದ ಇಲ್ಲವೇ ವೃತ್ತಿಯಿಂದ ವ್ಯಕ್ತಿಯ
ತಿಯನ್ನು ಗುರುತಿಸದೇ ಅವನ ನೀತಿಯಿಂದ ಅತ್ಮವಿಧಿಯಿಂದ ಜಾತಿ ಗುರುತಿಸ
ಕೆಂದು ತಿಳಿಸಿದರು.

ಬಸವಣ್ಣನವರ ಕೊಡುಗೆಗಳಲ್ಲಿ ಕಾಯಕವು ಶ್ರೇಷ್ಠ ಕೊಡುಗೆಯಾಗಿದೆ.
ತಿಯೊಬ್ಬ ವ್ಯಕ್ತಿಯು ಅವನು ಗುರುವಾಗಲಿ ಜಂಗಮನಾಗಲಿ ಇಲ್ಲವೇ ಭಕ್ತನಾಗಲಿ
ಾದರೊಂದು ಕಾಯಕ ಮಾಡಿ ಹೊಟ್ಟೆ ಹೊರೆಯ ಕಾಯಕ ತತ್ವವನ್ನು ಪ್ರತಿ-
ಾದಿಸಿದರು. ಸೋಮಾರಿಗಳನ್ನು ಎಚ್ಚರಿಸಿ ಸಮಾಜವನ್ನು ಆರ್ಥಿಕವಾಗಿ ಬಲಪಡಿಸಲು

ಯೋಚಿಸಿದರು. ಬಸವಣ್ಣನವರು ಕಾಯಕಕ್ಕೆ ಮಹತ್ವ ಕೊಟ್ಟರು. ಅವರ ದೃಷ್ಟಿಯ
ಕಾಯಕ ಕೈಲಾಸವಾಯಿತು. ಕಾಯಕವಿದ್ದಲ್ಲಿ ಆರೋಗ್ಯವಿದೆ, ಆತ್ಮಗೌರವವಿ
ಸಂಪದವಿದೆ, ಎಲ್ಲರೂ ದುಡಿದು ತಿನ್ನಬೇಕು. ಕಾಯಕಷ್ಟ ಮಾಡೇ ತಿನ್ನುವ ಅ
ವಿಷ. ಸತ್ಯ ಶುದ್ಧವಾದ ಯಾವುದೆಲ್ಲ ಕಾಯಕ ಮಾಡಿದರೂ ಅದು ಕಾಯಕವೆನಿಸುತ್ತ
ದುಡಿಮೆ ಆರಾಧನೆ ಈ ಎರಡರ ಸಮನ್ವಯವನ್ನು ಅಣ್ಣನವರು ಕಾಯಕ ಎಂ
ಕರೆದರು. "ಕಾಸಿ ಕಮ್ಮರನಾದ ಬೀಸಿ ಮಡಿವಾಳನಾದ ಹಾಸನ್ನಿಕ್ಕಿ ಸಾಲಿಗನಾದ
ಇಂಥ ಯಾವುದೇ ವೃತ್ತಿ ವ್ಯವಸಾಯವಾದರೂ ಅದು ಪರಶಿವನ ಆರಾಧನೆ ಎಂದ
ಹೇಳಿಕಾಯಕದಲ್ಲಿ ತನುಮನ ಶ್ರದ್ಧಾ ಭಕ್ತಿ ಗೌರವದಿಂದ ತಲ್ಲೀನನಾದವರ ಮ
ಕೈಲಾಸವೆಂದು ಕರೆದರು. ಈ ಕಾಯಕದಿಂದ ಸಮಾಜದ ಪರಾವಲಂಬತನ ದೂ
ವಾಗಿಜನರಲ್ಲಿ ನವಚೈತನ್ಯ ಉಂಟಾಯಿತು. ಒಟ್ಟನಲ್ಲಿ ಬಸವಣ್ಣನವರ ಸಾಮಾಜಿಕ
ಧಾರ್ಮಿಕ, ಆರ್ಥಿಕ ವಿಚಾರಗಳನ್ನು ಅದರಲ್ಲಿಯೂ ಮುಖ್ಯವಾಗಿ ಕಾಯಕ ಶ್ರ
ಗೌರವ ಹಾಗೂ ಸಮಾಜವಾದಿಗಳು ಸಮಗ್ರವಾಗಿ ಸಾಮಾಜಿಕ ಕ್ರಾಂತಿಗೆ ಪುಷ್ಟಿ
ಕೊಟ್ಟವು.

ಈ ಸಮಾಜದ ಸಮಾನತೆಯ ಹೋರಾಟದಲ್ಲಿಯೇ ಬಸವಣ್ಣನವರು ಕೂಡಲ
ಸಂಗಮನಾಥನಲ್ಲಿ ಐಕ್ಯರಾದರು. ಸಮಾನತೆಗೆ ಇನ್ನೂ ಪಕ್ವವಾಗದ ಕಲ್ಯಾಣ ಕ್ರಾಂ
ಯನ್ನು ಕಂಡಿತು. ಬಸವನೇರ್ಪಡಿಸಿದ ಅಂತರ್‌ಜಾತಿ ವಿವಾಹ ಕ್ರಾಂತಿಗೆ ಕಿಡಿಯಾ
ಯಿತು. ನವ ದಂಪತಿಗಳಿಗೆ ಹಾಗೂ ಅವರ ಹಿರಿಯರಿಗೆ ಕೊಟ್ಟ ಚಿತ್ರ ಹಿಂಸೆಗ
ಕಲ್ಯಾಣದೊರೆ ಬಿಜ್ಜಳನನ್ನ ಅಹುತಿ ತಕ್ಕೊಂಡಿತು.

---

—ಶ್ರೀ ನಾಗೇಶನಿಲುಗಲೆ,
ಕಂದಗಲ್, ಹುನಗುಂದ ತಾ, ಬಿಜಾಪುರ ಜಿಲ್ಲೆ.



# ಶರಣರು ಕಟ್ಟಿದಂಥ ಸ್ವಯಂಪೂರ್ಣ ಸಮಾಜ

ಊರಿಗೊಂದು ಮನೆ ಕಟ್ಟ ಬೇಕೆನ್ನುತ್ತಾರೆ ಹಿರಿಯರು. ಹಿರಿಯರ ಹೇಳಿಕೆಯಲ್ಲಿ
ಂದು ವಿಶೇಷ ಅರ್ಥವಿದೆ. ಇಂಥ ಮನೆ ಕಟ್ಟುವುದೆಂದರೆ ಕಲ್ಲು ಕಟ್ಟಿಗೆಯಿಂದಲ್ಲ.
ಚ್ಚುಗಾರಯಿಂದಲ್ಲ. ಪ್ರೀತಿ ಬಾಂಧವ್ಯದಿಂದ. ಬಸವಣ್ಣ ಇಂಥ ಮನೆಯನ್ನು ಅಂದೇ
ಟ್ಟಿ, ಮೂರ್ತಿಗೊಂಡು ಕ್ರಿಯಾರೂಪ ಕೊಟ್ಟಿದ್ದಾರೆ. ಆತ ಕಟ್ಟಿದ್ದು ಬರಿ ಊರಿಗೊಂ
ಲ್ಲ, ದಿಕ್ಕು ದೆಸೆಯ ತುಂಬ, ಕೇರಿ ಕೇರಿ ತುಂಬ ಧರೆಯ ತುಂಬ, ನೆಲೆಯಿಲ್ಲದವರಿಗೆ
ಲೆ ಕಲ್ಪಿಸಿದ ಮನೆ. ಬೆಲೆಯಿಲ್ಲದವರಿಗೆ ಬೆಲೆ ತಂದು ಕೊಟ್ಟಮನೆ.

ಸಕಲ ಜೀವಾತ್ಮರ ಲೇಸ ಬಯಸುವ ಬಸವಣ್ಣನ (ತತ್ವ) ಸದಿಚ್ಛೆ. ನಿಸರ್ಗದ
ಚ್ಛೆಯೂ ಆಗಿದೆ. ಈ ಸದಿಚ್ಛೆ ಕ್ರಿಯಾರೂಪ ತಾಳುವುದೇ ಒಂದು ಕ್ರಾಂತಿ.
ಎಂದರೆ ಸಕಲರಿಗೆ ಲೇಸಾಗುವುದು ಕೆಲವರಿಗೆ ಪಥ್ಯವೆನಿಸಿದರೆ, ಕೆಲವರಿಗೆ ಅಪಥ್ಯ
ನಿಸುತ್ತದೆ. ನಿಸರ್ಗದ ಈ ಕ್ರಾಂತಿಯಿಂದಾಗಿ ಬದಲಾಗಿ ಬೋಳಾದ ಗಿಡ ಮರ
ತ್ತೆ ಹಸಿರು ತುಂಬಿ ಹೂವು ಕಾಯಿ ಕಳೆದುಂಬಿ ನಿಲ್ಲುತ್ತವೆ. ಹಾಗೆಯೇ ಈ ಬಸವ
ಕ್ರಾಂತಿಯಿಂದಾಗಿ ಉಸಿರು ಕಳ ಕೊಂಡರು ಮತ್ತೆ ಉಸಿರು ಪಡೆಯುತ್ತಾರೆ. ಹೇಳ
ಸರಿಲ್ಲದವರು ಹೆಸರು ಪಡೆಯುತ್ತಾರೆ. ಶರಣರೆಂಬವರು ಬಸವ ಕ್ರಾಂತಿಯ ಸೃಷ್ಟಿ
ನ್ನಬಹುದು ! ಅಮಾಯಕ, ಅಲಕ್ಷಿತ, ದಲಿತ, ದುರ್ಬಲ ರೆಂಬವರಿಂದಲೇ ಒಂದು
ಹೊಸ ಸಮಾಜ ನಿರ್ಮಾಣವಾಗುವಂತೆ ಮಾಡಿದ್ದು ಬಸವಣ್ಣನ ಸದಿಚ್ಛೆಗೆ ಹಾಗೂ
ಸತ್ಸದ್ದಿ ತನಕ್ಕೆ ಸಾಕ್ಷಿಯಾಗಿದೆ. ನಿಷ್ಕಳಂಕ, ನಿರ್ಮೋಹ, ನಿರಾಳ ಚಾರಿತ್ರದಿಂದ ಹೀನ
ಲದವರಾದ ವ್ಯಾಸ, ಅಗಸ್ತ್ಯ, ದೂರ್ವಾಸ ಮೊದಲಾದವರು ಮಹಾಋಷಿಗಳಾಗ
ಲ್ಲವೆ ಅದೇ ರೀತಿ ಹರಳಯ್ಯ, ಕಕ್ಕಯ್ಯ, ಮಾದಾರ ಚನ್ನಯ್ಯ, ಅಂಬಿಗರ ಚೌಡಯ್ಯ
ಮೊದಲಾದವರು ಸಚ್ಚಾರಿತ್ರ್ಯದಿಂದ ಶುದ್ಧ ಶರಣರಾಗಿ ಬೆಳಗಿದ್ದು, ಹೊಸ
ಸಮಾಜ ಕಟ್ಟಲು ಸಾಧ್ಯವಾದದು ಬಸವಕ್ರಾಂತಿಯಿಂದಾಗಿ !!

ಬಸವಾದಿ ಶರಣರು ಕಟ್ಟಿದ ಸಮಾಜದಲ್ಲಿ ವಿಪ್ರ ಮೊದಲು ಅಂತ್ಯಜಕಡೆಯಾಗಿ
ದಾಸೀಪುತ್ರ ವೇಶ್ಯಾಪುತ್ರ ಹಾಗೂ ಎಲ್ಲ ಸ್ತ್ರೀ ಪುರುಷರು ಎಲ್ಲ ಮಾನವೀಯ ಹಕ್ಕು
ಗಳಿಗೆ ಅರ್ಹತೆ ಪಡೆದವರಾಗುತಾರ್ತೆ. ಅಂಗದ ಮೇಲೆ ಲಿಂಗವುಳ್ಳವರೆಲ್ಲರೂ ಈ
ಸಮಾನ ರೇಖೆಯಲ್ಲಿ ಬರುತ್ತಾರೆ. ಹಿಂದೆ ಯಾವುದೇ ಕುಲವಿರಲಿ, ಪೂರ್ವಾಶ್ರಮ
ಕಳಕೊಂಡುಶರಣ ಧರ್ಮದವರಾಗುತ್ತಾರೆ. ಆದರೆ ಅವರು ಹಿಂದಿನ ಉದ್ಯೋಗವನ್ನು
ಬಿಡಬೇಕೆಂದು ಕಟ್ಟುನಿಟ್ಟು ಇಲ್ಲ. ಎಲ್ಲ ಉದ್ಯೋಗಗಳಿಗೂ ಸಮಾನ ಮರ್ಯಾದೆ ಎಲ್ಲ
ಉದ್ಯೋಗದವರಿಗೂ ಸರಿ ಸಮಾನ ಗೌರವ ! ಯಾವುದೆ ಕಸಬು ಇರಲಿ, ಉದ್ಯೋಗ
ಇರಲಿ-ಸತ್ಯ ಶುದ್ಧ ಪ್ರಾಮಾಣಿಕ ದುಡಿತದಿಂದ ಅಸಂಗ್ರಹ ನೇಮ ಪಾಲನೆಯಿಂದ ಒಂದೇ

ಹೆಸರನ್ನು ಪಡೆಯುತ್ತವೆ. ಕಾಯಕವೆಂದು, ದುಡಿಮೆಯನ್ನು ಕಡ್ಡಾಯ ಗೊಳಿಸಿ
ಈ ಶರಣರು ಬದುಕಿಗೊಂದು ಸ್ವಾವಲಂಬ ಸುಭದ್ರ ಆಧಾರ ಕಲ್ಪಿಸಿ, ಸಮಾ
ವಿಜ್ಞಾನಿ ಯೆನಿಸುತ್ತಾರೆ. ನುಡಿಯುವುದರಲ್ಲಿ, ನಡೆಯುವುದರಲ್ಲಿ, ದುಡಿಯುವು
ರಲ್ಲಿ ಶುಭ್ರತೆ, ನೈತಿಕತೆ ಸಾತ್ವಿಕತೆ ಸತ್ಯಸಂಧತೆ, ಸಮಾನತೆಗಳನ್ನು ಕಟ್ಟು
ನಿಟ್ಟಾಗಿ ಆಚರಣೆಯಲ್ಲಿ ತಂದು ಮಾನವಜೀವನ ವಿಧಾನಕ್ಕೆ ಒಂದು ಹೊಸಅರ್ಥವ
ಕಲ್ಪಿಸುತ್ತಾರೆ. ಮಾನವ ಜನ್ಮವನ್ನು ಸಾರ್ಥಕ ಗೊಳಿಸುತ್ತಾರೆ.

ತಾನು ದುಡಿದದ್ದು ತನಗಷ್ಟೇ (ತನ್ನ ಕುಟುಂಬಕ್ಕೆ ಮಾತ್ರ) ಎಂದರೆ ಸ್ವಾ
ವಾಗುತ್ತದೆ. ತಾನು ದುಡಿದ ಫಲದಲ್ಲಿ ತಕ್ಕ ಮಟ್ಟಿಗೆ ತನಗೆ ಆಧಾರವಾದ ಸಮಾಜಕ್ಕ
ಸಂಸಾರಕ್ಕೂ ಸಲ್ಲಬೇಕು. ತೆರಿಗೆಯ ಮೂಲಕ ಸರಕಾರಕ್ಕೆ ಸಂದರೆ, ದಾಸೋಹ
(ಸೇವೆಯ) ಮೂಲಕ ಸಮಾಜಕ್ಕೆ ಸಲ್ಲಬೇಕು- ಹೀಗೆ ಕಾಯಕ ವ್ಯಕ್ತಿ ವಿಕಾಸವನ್ನು
ಸಾಧಿಸಿದರೆ ದಾಸೋಹ, ಸಮಷ್ಟಿ (ಸಮೂಹ-ಸಮಸ್ತ ಸಮಾಜದ) ವಿಕಾಸವನ್ನು
ಸಾಧಿಸುತ್ತದೆ. ಕಾಯಕ-ದಾಸೋಹ-ಒಂದೇ ತತ್ವಕ್ಕೆ ಸಂಬಂಧಿಸಿದ ಎರಡು ಮು
ಗಳು. ಹೀಗೆ ಈ ಕಾಯಕ-ದಾಸೋಹ-ತತ್ವ ತಾತ್ವಿಕ ಜೀವನವನ್ನು ಸುವ್ಯವಸ್ಥಿ
ಸುಸಂಸ್ಕೃತ, ಸ್ವಾವಲಂಬಿತ ಸಂತೃಪ್ತ ಬದುಕನಾಗಿ ರೂಪಿಸುತ್ತದೆ. ಅಷ್ಟೇ ಅ
ಪಾರಮಾರ್ಥಿಕ ಬದುಕಿಗೂ ಸೋಪಾನವಾಗಿ ಪರಿಣಮಿಸುತ್ತದೆ.

ದಲಿತ, ದುರ್ಲಕ್ಷಿತ, ಅಮಾಯಕ ಮೊದಲಾದ ಹಿಂದುಳಿದನರು ಮುಂದುವರಿ
ರಾಗಬೇಕೆಂದು ಇಂದಿನ ಸರಕಾರ ಅನೇಕ ಯೋಜನೆಗಳನ್ನು ಯೋಜಿಸಿ ಸವಲತ್ತು
ಸೌಲಭ್ಯಗಳನ್ನು ಕಲ್ಪಿಸಿರುತ್ತದೆ. ಕೇವಲ ಆರ್ಥಿಕವಾಗಿ ಇಂದು ಇವರು ಮುಂದುವರಿ
ಬೇಕು. ಸಂಸ್ಕಾರವಿಲ್ಲದ ಸವಲತ್ತು ಸಮಷ್ಟಿ ಜೀವನಕ್ಕೆ ಆಪತ್ತು! ಈ ನಿಟ್ಟಿನ
ನಮ್ಮ ಸರಕಾರ ಅಷ್ಟೊಂದು ಗಮನಹರಿಸಿದಂತಿಲ್ಲ ಆದರೆ, ಬಸವಣ್ಣ ಯೋಜಿಸಿ
ಸಮಾಜ ರಚನೆಯ ಪರಿಕಲ್ಪನೆಯೆ ಬೇರೆ. ಬದುಕಿನ ಬಹಿರಂಗ ವಿಕಾಸಕ್ಕೆ ದುಡಿದು
ಪಡೆದ) ದುಡ್ಡು ಭದ್ರತೆಯನ್ನು ಒದಗಿಸಿದರೆ, ಅಂತರಂಗ ವಿಕಾಸಕ್ಕೆ ನಡೆನುಡಿಯ
ಸಂಸ್ಕಾರ ಭದ್ರತೆಯನ್ನು ಒದಗಿಸುತ್ತದೆ ಈ ಉದ್ದೇಶದಿಂದ ಬಸವಾದಿ ಶರಣರು ಹುಟ್ಟು
ಹಾಕಿದ ಸಂಸಾರ ಕೇಂದ್ರಗಳು ಎರಡು. ಒಂದು ದಾಸೋಹ ಮಹಾಮನೆ ಇನ್ನೊಂದು
ಅನುಭವ ಮಂಟಪ. ತ್ಯಾಗ ಮನೋಭಾವ ಹಾಗು ಸೇವಾನುಭವ ಪಡೆಯುವುದಕ್ಕೆ
ದಾಸೋಹ ಮಹಾಮನೆಯಾದರೆ, ವಿದ್ಯಾನುಭವ ಆತ್ಮಾನುಭವ, ಶಿವಾನುಭವ ಸಂಪಾ
ದಿಸಿಕೊಳ್ಳುವುದಕ್ಕೆ ಅನುಭವ ಮಂಟಪವಾಗುತ್ತದೆ. ಇವು ಸಂಸ್ಕಾರದ ಮಾಧ್ಯಮ
ಗಳಾದಂತೆ ಆಂದೋಲನದ ಕ್ರಾಂತಿಯ ಮಾಧ್ಯಮಗಳಾಗಿ ಪರಿಣಮಿಸುತ್ತವೆ.

ಅದರಿಂದಾಗಿ ಮೇಲ್ವರ್ಗದವರು ಹರಿಹಾಯುತ್ತಾರೆ. ಉರಿಯುತ್ತಾರೆ. ಅಣಕ
ವಾಡುತ್ತಾರೆ. ಆದರೆ ಅಂಥವರಿಗೆ ಬಸವಣ್ಣ ಕೊಟ್ಟ ಉತ್ತರ ಮಾರ್ಮಿಕವಾಗಿದೆ.

"ತಿರುಕರೆನ್ನದಿರಿ ಭೋ ಎನ್ನ ತಂದೆಗಳನು
ತಿರುಕರೆನ್ನದಿರಿ ಭೋ ಎನ್ನ ಬಂಧುಗಳನು,
ತಿರುಕರೆನ್ನದಿರಿ ಭೋ ಎನ್ನ ದೇವರನು,
ತಿರುಕರೆನ್ನದಿರಿ ಭೋ ಎನ್ನ ಒಡೆಯರನು" ಎಂದು ಬಸವಣ್ಣ

ನುಡಿದದ್ದು ಉಚಿತವಾಗಿದೆ. ಸೇರದವರಿಗೆ ಶರಣರು ತಿರುಕರೆಂದು ಎನಿಸಿದರೆ. ಬಸವಣ್ಣನಿಗೆ ಬಂಧು ತಂದೆಗಳಾಗಿ ಒಡೆಯ ದೇವರಾಗಿ ಪೂಜ್ಯರೆನಿಸುತ್ತಾರೆ. ದಾಸೋಹ ಮಹಾಮನೆಯೆಂಬುದು ಕೆಲಸಗೇಡಿಗಳಿಗೆ ಪುಕ್ಕಟೆ ಉಣಿಸುವ ಅನ್ನಛತ್ರವಲ್ಲ. ಎಲ್ಲರೂ ದುಡಿದು ಸಾಮೂಹಿಕವಾಗಿ ಹುಟ್ಟು ಹಾಕಿದಂಥ ಪ್ರಸಾದ ನಿಲಯವದು ಸೇವಾ ಮನೋಭಾವ ಬೆಳೆಸುವ ತರಬೇತಿ ಕೇಂದ್ರವದು. ಪ್ರಾಮಾಣಿಕವಾಗಿ ದುಡಿದು ಣ್ಣಬೇಕೆಂದು ಹೇಳಿದ ಬಸವಣ್ಣ ಪುಕ್ಕಟೆಯಾಗಿ ತಿನ್ನುಣಲು ಅವಕಾಶ ಕೊಡುವನು ಹೇಗೆ? ತನ್ನ ತತ್ವಕ್ಕೆ ತಾನೇ ವಿರೋಧವಾಗಿ ಬಸವಣ್ಣ ನಡೆಯುವನು? ಹೇಗೆ ಎಂದೂ ಆಗಿಹೋದ ಸಂಗತಿಗಳಿಗೆ ಇಲ್ಲದ ಅರ್ಥ ಹಚ್ಚಿ ಬಸವಣ್ಣನಿಗಾಗಲಿ ಶರಣರಿಗಾಗಲಿ ಅಪವಾದ ಕೊಡುವಲ್ಲಿ ಅರ್ಥವಿಲ್ಲ.

ಇಂಥ ಜಗತ್ತಿನ ಯಾವುದೇ ಭಾಗದಲ್ಲಿ ಎಂದೂ ಆಗದೆ ಇದ್ದ ಸುಧಾರಣೆಯ ಆದೋಲನ ೧೨ ನೇ ಶತಮಾನದಲ್ಲಿ ಉದ್ಭವಿಸಿ ಮೇಲ್ವರ್ಗದವರಲ್ಲಿ ಬಿರುಗಾಳಿ ಎಬ್ಬಿಸಿದ್ದು ಸಹಜವೆ! ಅನ್ಯರ ದುಡಿಮೆಯ ಮೇಲೆ ಬದುಕುವ ಪರೋಪ ಜೀವಿಗಳಿಗೆ ಈ ಆಂದೋಲನಕು ತುತ್ತಾಗಿ ಪರಿಣಮಿಸಿಬೇಕು. ಅಂಥವರ ಕುತಂತ್ರದಿಂದಾಗಿ ಹಲವು ಕಾಲ ಈ ಹೊಸ ಆಂದೋಲನದ ಗತಿ ಪ್ರಗತಿಗೆ ಪೆಟ್ಟು ಬಿದ್ದಿರಬೇಕು. ಆದರೆ ಈ ಆಂದೋಲನ ಅಥವಾ ಬಸವ ಕ್ರಾಂತಿ ವಿಫಲವಾಯಿತೆಂದು. ಅಪಸ್ವರವೆತ್ತುವುದರಲ್ಲಿ. ಅರ್ಥವಿಲ್ಲ. ಈಗಲೂ ಬಸವಾದಿ ಶರಣರ ತತ್ವ ಜೀವಂತವಾಗಿದೆ. ಅದು ಬದುಕಿ ಬಾಳಿ (ಆಚರಿಸಿ) ಗಟ್ಟಿಗೊಳಿಸಿದ ತತ್ವ ಹೊರತಾಗಿ ಕಾಲ್ಪನಿಕವಾಗಿ ಕಟ್ಟಿದಂಥ ಪೊಳ್ಳುತತ್ವವಲ್ಲ.

ಆದರೆ ಇಂದು ಅಂಥ ತತ್ವಾಧಾರಿತ ಸಮಾಜ ಎಲ್ಲಿ ಇದೆ ಎಂದು ಕೇಳಬಹುದು. ಅದಕ್ಕೆ ಉತ್ತರ ವಿಷ್ಟೆ. ಗಾಂಧೀ ತತ್ವ ಈ ಆಚರಣೆಯಲ್ಲಿ ಇಲ್ಲವೆಂದರೆ ಅದಕ್ಕೆ ಗಾಂಧೀ ಅನುಯಾಯಿಗಳು ತತ್ವನಿಷ್ಠವಾಗಿ ಪಾಲಿಸುತ್ತಿಲ್ಲವೆಂದು ಅರ್ಥ. ಆದರೆ, ಗಾಂಧೀ ತತ್ವ ಸತ್ವಹೀನವೆಂದಾಗಲಿ ನಿರರ್ಥಕವೆಂದಾಗಲಿ ಅರ್ಥವಲ್ಲ. ಹಾಗೆಯೆ, ಬಸವ ತತ್ವವನ್ನು ಬಸವಾಭಿಮಾನಿಗಳು ಅನುಷ್ಠಾನದಲ್ಲಿ ತರಲು ಸೋಮಾರಿಗಳಾದ ಪಕ್ಷದಲ್ಲಿ ಅದು ಸತ್ವ ಹೀನವೆಂದಾಗಲಿ ಅನುಷ್ಠಾನಕ್ಕೆ ಅಸಾಧ್ಯವೆಂದಾಗಲಿ ಅರ್ಥವಲ್ಲ. ಕಡಲೆಯನ್ನು ತಿಂದು ಅರಗಿಸಿಕೊಳ್ಳಬೇಕಾದರೆ ಗಟ್ಟಿ ಹಲ್ಲುಬೇಕು. ಬಲಿಷ್ಠ ಪಾಚಕಾಂಗ ಬೇಕು. ಅದರಂತೆ, ಯಾವುದೆ ಸತ್ವಪೂರ್ಣ ತತ್ವವನ್ನು ಆಚರಿಸಬೇಕಾದರೆ, ಗಟ್ಟಿ ಮನಸು ಬೇಕು. ಅಚಲ ಶ್ರದ್ಧೆ ಹಾಗು ನಿಶ್ಚಲ ನಿಷ್ಠೆಬೇಕು. ಯಾವ ತತ್ವಾಚರಣೆಗೆ ಬದ್ಧರಾಗಿ ಅಂದು ಶರಣರು ಜಾತ್ಯಾತೀತ ಸ್ವಯಂಪೂರ್ಣ, ಸಂತೃಪ್ತ ಸಮಾಜವನ್ನು ಕಟ್ಟಿದರೊ–ಆ ಬಸವ ತತ್ವ ಕಾಲಾತೀತ, ಅಬಾಧಿತ, ಸ್ವೀಕಾರ ಯೋಗ್ಯ!!

—ಬ. ಗಿ. ಯಲ್ಲಟ್ಟಿ, ಬಸವನಿಲಯ, ಬನಹಟ್ಟಿ, ವಿಜಾಪುರ–ಜಿಲ್ಲೆ.

# ಕೊಲುವನೇ ಮಾದಿಗ–ಒಂದು ವಿವೇಚನೆ

ಕೊಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ!
ಕುಲವೇನೋ ಆವಂದಿರ ಕುಲವೇನೋ ?
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲ ಸಂಗನ ಶರಣರೇ ಕುಲಜರು!

ಬಸವಣ್ಣನವರ ಈ ವಚನ ತುಂಬಾ ಕುತೂಹಲದಾಯಕವಾಗಿದೆ. ಮಾತ್ರವಲ್ಲ ವಿನೂತನ ವಿಚಾರಧಾರೆಯಿಂದ ಕಳಕಳಿಸುತ್ತಿದೆ. ಆದರೆ ಇದನ್ನು ಅಷ್ಟಾಗಿ ಗಮನಿಸದ ನಮ್ಮ ಅನೇಕ ವಿದ್ವಾಂಸರು ಈ ವಚನ ಮೂಲದಲ್ಲಿ 'ಕೊಲುವನೇ ಮಾದಿಗ ಹೊಲಸು ತಿಂಬುವನೇ ಹೊಲೆಯ!" ಎಂದಿದ್ದರೂ ಅದೇನು ಕಾರಣವೋ ಇಂದು "ಕೊಲ್ಲುವವನೇ ಮಾದಿಗ ಹೊಲಸು ತಿಂಬುವವನೇ ಹೊಲೆಯ" ಎಂದೇ ಓದಿಕೊಳ್ಳುತ್ತಿದ್ದಾರೆ. ಹಾಗೂ ಅದೇ ರೀತಿ ವ್ಯಾಖ್ಯಾನಿಸುತ್ತಿದ್ದಾರೆ. ಅಂದರೆ ಪ್ರಾಣಿಗಳನ್ನು ಯಾರು ಕೊಲ್ಲುವರೋ ಅವರು ಮಾದಿಗರು ಮತ್ತು ಕೊಂದ ಆ ಪ್ರಾಣಿಗಳ ಮಾಂಸವನ್ನು ಯಾರು ತಿನ್ನು-ವರೋ ಅವರು ಹೊಲೆಯರು ಎಂದು ಅವರು ಅರ್ಥೈಸುವ ಈ ರೀತಿ ತುಂಬಾ ಅಸಂಬದ್ಧವಾದುದು ಎಂದು ನನ್ನ ಸ್ಪಷ್ಟ ಅಭಿಪ್ರಾಯವಾಗಿದೆ.

ಏಕೆಂದರೆ ಇಂದು ಅನೇಕರು ಭಾವಿಸುವಂತೆ ಹೊಲೆಯ ಮತ್ತು ಮಾದಿಗ ಎಂಬ ಪದಗಳು ಮೂಲತಃ ಕೀಳು ಕುಲದ ಅರ್ಥಕೊಡುವ ಪದಗಳಲ್ಲ. ಇವು ಆಯಾ ಕಾಯಕಕ್ಕೆ ಬಂದ ಪವಿತ್ರ ಹೆಸರುಗಳು. "ಮಾದಿಗತನ" ಎಂದರೆ ಪಾದರಕ್ಷೆಗಳನ್ನು ಸಿದ್ಧಪಡಿಸುವುದು ಎಂದು ಅರ್ಥವಾಗುತ್ತಿತ್ತೇ ಹೊರತು ಪ್ರಾಣಿಗಳನ್ನು ಕೊಲ್ಲುವುದು ಎಂದರ್ಥವಾಗುವುದಿಲ್ಲ. ಅದೇ ರೀತಿ ಹೊಲೆಯತನ ಎಂದರೆ ಸತ್ತ ಪ್ರಾಣಿಗಳನ್ನು ಎಳೆದೊಯ್ದು ಅದರ ಚರ್ಮವನ್ನು ಸುಲಿದು ಹದಗೊಳಿಸುವುದೆಂದು ಅರ್ಥವಾಗುವುದೇ ಹೊರತು ಕೊಂದ ಪ್ರಾಣಿಯ ಆ ಮಾಂಸವನ್ನು ತಿನ್ನುವುದು ಎಂದಾಗುವುದಿಲ್ಲ. ಯಾರಾದರೂ ಹಾಗೆ ಅರ್ಥಮಾಡಿದರೆ ಅದು ಶುದ್ಧ ತಪ್ಪು ಎಂದು ನನ್ನ ಭಾವನೆ. ಏಕೆಂದರೆ ಅದೆಲ್ಲ ತರುವಾಯ ಆರೋಪಿಸಲಾದ ಕೆಟ್ಟ ಅರ್ಥಗಳೇ ಹೊರತು ಮೂಲದಲ್ಲಿ ಅವು ಒಂದು ಕಾಯಕದ ಹೆಸರೇ ಆಗಿದ್ದವು. ಹನ್ನೆರಡನೆಯ ಶತಮಾನದಲ್ಲಿ ಶರಣರು ಈ ಪದಗನ್ನು ಬಳಸಿದ ಹಿನ್ನೆಲೆಯನ್ನು ಗಮನಿಸಿದರೆ ಯಾರಿಗಾದರೂ ನನ್ನ ಮಾತಿನ ಅರ್ಥವಾದೀತು. ಮೇಲಿನ ವಚನವನ್ನು ಬರೆದ ಬಸವಣ್ಣನವರ ಭಾವನೆಯಲ್ಲಂತೂ ಈ ಕಾಯಕಗಳು ಅತ್ಯುಚ್ಛಕೋಟಿಯುವಾಗಿದ್ದವು. ಹರಳಯ್ಯ-ನವರು ಬಸವಣ್ಣನವರಿಗಾಗಿ ತಮ್ಮ ಸತ್ಯಶುದ್ಧ ಕಾಯಕದಿಂದ ಚಮ್ಮಾವುಗೆಯನ್ನು ಸಿದ್ಧಪಡಿಸಿ ಅವರಿಗೊಪ್ಪಿಸಲು ಬಂದರೆ ಬಸವಣ್ಣನವರು ಆ ಚಮ್ಮಾವುಗೆಗಳನ್ನು

ಾಲಲ್ಲಿ ಹಾಕಿಕೊಳ್ಳದೆ ತಮ್ಮ ತಲೆಯ ಮೇಲೆ ಇರಿಸಿಕೊಂಡರು ಎಂಬ ಪ್ರಸಂಗವನ್ನು
ನೆದರೆ ಅವರು ಈ ಕಾಯಕಕ್ಕೆ ಕೊಟ್ಟ ಗೌರವ ಎಂಥದು ಎಂಬುದು ಯಾರಿಗಾದರೂ
ನವರಿಕೆ ಆದೀತು! ತಾನು ಆ ರಾಜ್ಯದ ಮುಖ್ಯ ಮಂತ್ರಿಯ ಕಾಯಕವನ್ನು
ಹುದ್ದೆಯನ್ನು] ಕೈಗೊಂಡಿದ್ದರೂ ತನ್ನ ಕಾಯಕಕ್ಕಿಂತಲೂ ಹರಳಯ್ಯನವರ
ಚಮ್ಮಾವುಗೆ ನಿರ್ಮಿಸುವ ಕಾಯಕವೇ ಸರ್ವಶ್ರೇಷ್ಠವಾದದು ಎಂಬುದನ್ನು ಅವರು
ಮ್ಮ ತಲೆಯ ಮೇಲೆ ಹೊರುವ ಮೂಲಕ ಸಾರಿದ್ದಾರೆ ಎಂದು ನನ್ನ ಭಾವನೆ.

ಇದರಿಂದ ನಾವು ಅಂದು ಕಾಯಕದಲ್ಲಿ ಯಾವುದೇ ಬಗೆಯ ಮೇಲು ಕೀಳುಗಳಿರ
ಲ್ಲವೆಂಬುದನ್ನು ಗಮನಿಸಬಹುದು. ಶರಣರು ತಮ ತಮಗೆ ಸಾಧ್ಯವಾದ ಕಸುಬು
ಳನ್ನೆಲ್ಲಾ ಆಯ್ಕೆ ಮಾಡಿಕೊಂಡು ಜೀವನ ಸಾಗಿಸಿದ್ದಾರೆ. ಕಾಶ್ಮೀರದಿಂದ ಬಂದಿದ್ದ
ುಹದೇವ ಭೂಪಾಲ ಎಂಬ ಅರಸು ಕಟ್ಟಿಗೆ ಕಡಿದು ತಂದು ಮಾರಿ ಜೀವನ ಮಾಡುವ
ಾಯಕವನ್ನು ಆಯ್ಕೆ ಮಾಡಿಕೊಂಡು "ಮೋಳಿಗೆಯ ಮಾರಯ್ಯ" ಎಂಬ ಹೊಸ
ಭಿದಾನವನ್ನು ಇಟ್ಟು ಕೊಂಡಿದ್ದನ್ನು ನಾವು ಇಲ್ಲಿ ಗಮನಿಸಬೇಕು. ಇದು ನಾವು
ುಲಭವಾಗಿ ಓದಿಕೊಂಡು ಹೊರಡುವಷ್ಟು ಸರಳ ಸಂಗತಿಯಲ್ಲ. ಒಂದು ರಾಜ್ಯದ
ರಸು ಇನ್ನೊಂದು ರಾಜ್ಯಕ್ಕೆ ಬರೋದೆಂದರೆ ಸಾಮಾನ್ಯವಾಗಿ ದಂಡೆತ್ತಿಕೊಂಡು
ಾಳಿಗೈವುದಕ್ಕಾಗಿಯೇ ಹೊರತು ಬೇರೆ ಇನ್ನಾವ ಕಾರಣಕ್ಕೂ ಹಾಗೆ ಬರುತ್ತಿರಲಿಲ್ಲ.
ಾದರೆ ಈ ಮಹಾದೇವಭೂಪಾಲ ಕಾಶ್ಮೀರದಿಂದ ಒಬ್ಬ ಸಾಮಾನ್ಯ ವ್ಯಕ್ತಿಯಾಗಿ
ಲ್ಯಾಣಕ್ಕೆ ಬಂದು ಅದರಲ್ಲೂ ಅಂದಿನ [ಇಂದಿನ ಕೂಡ] ಸಮಾಜದ ಉಳಿದ ಜನರ
ಣ್ಣಲ್ಲಿ ಅತ್ಯಂತ ಕೀಳು ಕಸುಬೆಂದು ಪರಿಗಣಿಸಲ್ಪಡುತ್ತಿದ್ದ ಕಟ್ಟಿಗೆ ಕಡಿದು ತಂದು
ಮಾರುವ ಕಾಯಕ ಕೈಗೊಳ್ಳಬೇಕೆಂದರೆ ಅದು ಸಾಮಾನ್ಯ ಸಂಗತಿಯಲ್ಲ. ಒಂದು
ಾಜ್ಯದ ಅರಸ ಇನ್ನೊಂದು ರಾಜ್ಯದಲ್ಲಿ ಬಂದು ಹೀಗೆ ಪರಿವರ್ತಿತನಾದ ಘಟನೆ
ಹುಶಃ ನಮ್ಮ ದೇಶದ ಇತಿಹಾಸದಲ್ಲೇ ಇನ್ನೊಂದಿಲ್ಲ. ಇಂಥ ಅಸದೃಶವಾದ
ಮಾನಸಿಕ ಸಿದ್ಧತೆಯನ್ನು ತಂದುಕೊಡಬಲ್ಲ ಕಾಯಕಗಳಲ್ಲಿ ಮಾದಿಗತನ ಹೊಲೆ
ನಗಳೂ ಇದ್ದವು. ಹರಳಯ್ಯನವರೇ ಮುಂತಾದ ಶರಣ ಮಾನ್ಯರು ತಮಗೆ ಸಾಧ್ಯ-
ದ್ದ ಪಾದರಕ್ಷೆ ಮಾಡುವ, ಸತ್ತ ಪ್ರಾಣಿಗಳನ್ನು ಎಳೆದೊಯ್ದು ಅದರ ಚರ್ಮ
ುಲಿದು ಆ ಚರ್ಮವನ್ನು ಹದಮಾಡುವ ಮಾದಿಗತನದ ಕಾಯಕವನ್ನು ಆಯ್ಕೆ
ಮಾಡಿಕೊಂಡಿದ್ದರೆ, ನಾಗಿದೇವನೇ ಮುಂತಾದ ಶರಣಗಣ್ಯರು ಸತ್ತ ಪ್ರಾಣಿಗಳ
ಚರ್ಮ ಸುಲಿಯುವ ಹೊಲೆಯತನದ ಕಾಯಕವನ್ನು ಅಪ್ಪಿಕೊಂಡಿದ್ದರು.

ಆದರೆ ಇಂದಿನ ಕೆಲಪಂಡಿತರು ತಪ್ಪಾಗಿ ಅರ್ಥೈಸುವಂತೆ ಬಸವಣ್ಣನವರು
ಪ್ರಾಣಿಗಳನ್ನು ಯಾರು ಕೊಲ್ಲುತ್ತಾರೋ ಅವರು ಮಾದಿಗರು ಮತ್ತು ಅದರ ಮಾಂಸ
ವನ್ನು ಯಾರು ತಿನ್ನುತ್ತಾರೋ ಅವರು ಹೊಲೆಯರು ಎಂಬ ಅರ್ಥದಲ್ಲಿ ಅಂದರೆ

ಅವರು ಕೀಳುಕುಲದವರು ಎಂಬ ಅವಹೇಳನಾತ್ಮಕ ಧ್ವನಿಯಲ್ಲಿ ಹೇಳಿಲ್ಲ. ಏಕೆಂದ
ಅಂದು ಮಾದಿಗರು ಯಾವ ಪ್ರಾಣಿಗಳನ್ನೂ ಕೊಲ್ಲುತ್ತಿರಲಿಲ್ಲ. ಕೊಲ್ಲುವ ಜ
ಬೇರೆಯೇ ಇದ್ದರು. ಅದರಂತೆ ಸತ್ತ ಆ ಪ್ರಾಣಿಯ ಮಾಂಸವನ್ನು ಹೊಲೆಯ
ಅಂದು ತಿನ್ನುತ್ತಿರಲಿಲ್ಲ. ತಿನ್ನುವವರು ಅನ್ಯರಿದ್ದರು (ಇಂದಿಗೂ ಕೂಡ) ಈ ಸಂಗ
ಯನ್ನು ಬಸವಣ್ಣನವರು ಚೆನ್ನಾಗಿ ಬಲ್ಲರು. ಆದ್ದರಿಂದಲೇ ಅವರು ಕೊಲ್ಲುವನೇ ಮಾ
ಅಂದರೆ ಮಾದಿಗ ಪ್ರಾಣಿಗಳನ್ನು ಕೊಲ್ಲೂತ್ತಾನೆಯೇ ಎಂದು ಕೇಳಿ ಇಲ್ಲ. ಕೊಲ್ಲು
ದಿಲ್ಲ. ಅದೇ ರೀತಿ ಹೊಲಸು ತಿಂಬುವನೆ ಹೊಲೆಯ? ಎಂದು ಕೇಳಿ ಇಲ್ಲ ತಿನ್ನು
ದಿಲ್ಲ ಎಂದು ಉತ್ತರಿಸಿದ್ದಾರೆ ಎಂದೇ ನನ್ನ ಸ್ಪಷ್ಟ ಅಭಿಪ್ರಾಯ

ಹಾಗಾದರೆ ಅಂದು ಪ್ರಾಣಿಗಳನ್ನು ಯಾರು ಕೊಲ್ಲುತ್ತಿದ್ದರು? ಮಾಂಸವನ್ನು
ಯಾರು ತಿನ್ನುತಿದ್ದರು? ಎಂಬ ಪ್ರಶ್ನೆಗಳೇಳುವುದು ಸಹಜ. ಇದನ್ನು ತಿಳಿದುಕೊಳ್ಳ
ಲೇನೂ ನಾವು ಹೆಚ್ಚು ಕಷ್ಟಪಡಬೇಕಾದುದಿಲ್ಲ. ಬಸವಣ್ಣನವರು ಮೇಲಣ ವಚನ
ವನ್ನು ಮೂಲ ಪ್ರತಿಗಳಲ್ಲಿ ಹೇಗಿದೆಯೋ ಹಾಗೆಯೇ ಇಟ್ಟುಕೊಂಡು ನಾಲ್ಕಾರು ಸ
ಓದಿದರೆ ಇದು ಯಾರಿಗಾದರೂ ಅರ್ಥವಾಗುತ್ತದೆ. ಮೂಲ ಪ್ರತಿಯಲ್ಲಿ ಕೊಲುವನೆ
ಮಾದಿಗ ಎಂದು ಮೊದಲಾಗಿ ಅದು ಪೂರ್ಣ ಮುಗಿದಾಗ ಆ ಸಾಲಿನ ಕೊನೆಗೆ
ಒಂದು ಪ್ರಶ್ನಾರ್ಥಕ ಚಿನ್ಹೆ ಇದೆ. ಅಂದರೆ ಬಸವಣ್ಣನವರು ಇಲ್ಲಿ ನಿಜವಾಗಿಯೂ ಪ್ರಶ್ನೆ
ಚಿನ್ಹೆಯನ್ನು ಇಟ್ಟುಕೊಂಡೇ ಓದಿನೋಡಬೇಕು. ಆಗ ನಮಗೆ ಇದರ ಅರ್ಥ ಭಿನ್ನ
ರೀತಿಯಲ್ಲಿ ಹೊರಡುತ್ತಿರುವುದು ಗಮನಕ್ಕೆ ಬರುತ್ತದೆ. ಕೊಲುವನೇ ಮಾದಿಗ?
ಎಂದು ಪ್ರಶ್ನೆ ಮಾಡುವ ಮೂಲಕ ಬಸವಣ್ಣನವರು ನಾನು ಈ ಮೊದಲೇ ವಿವರಿಸಿ
ರುವಂತೆ ಮಾದಿಗರು ಪ್ರಾಣಿಗಳನ್ನು ಕೊಲ್ಲುತ್ತಾರೆಯೇ? ಇಲ್ಲ. ಆ ಕೆಲಸ ಮಾಡುವ
ವರು ಬೇರೆ ಜನ ಇದ್ದಾರೆ ಎಂದು ಸೂಚಿಸುತ್ತಾರೆ ಅದೇ ರೀತಿ ಹೊಲಸು ತಿಂಬುವನೇ
ಹೊಲೆಯ? ಎಂದು ಕೇಳುವ ಮೂಲಕ ಹೊಲೆಯ ಹೊಲಸನ್ನು ತಿನ್ನುತ್ತಾನೆಯೇ
ಇಲ್ಲ. ಅದನ್ನು ತಿನ್ನುವ ಜನರು ಬೇರೆಯೇ ಆಗಿದ್ದಾರೆ ಎಂದು ಇಲ್ಲಿ ಹೇಳುತ್ತಿದ್ದಾರೆ.

ನಿಮಗೆ ಇಲ್ಲಿ ಇನ್ನೊಂದು ಸಂಶಯ ಸುಳಿಯಬಹುದು. ಮೂಲದ ವಚನ
ಪಾಠಾಂತರದಲ್ಲಿ 'ಕೊಲುವನೇ ಮಾದಿಗ, ಹೊಲಸು ತಿನ್ನುವನೇ ಹೊಲೆಯ! ಎಂದು
ಮೊದಲ ಸಾಲು ಮುಗಿಯುವಲ್ಲಿ ಪ್ರಶ್ನಾರ್ಥಕ ಚಿನ್ಹೆಗಳಿಲ್ಲ. ಪ್ರಶ್ನಾರ್ಥಕ ಚಿನ್ಹೆಗಳಿಲ್ಲದಿ
ರುವಾಗ ಇಲ್ಲಿ ನಾವು ಯಾಕೆ ಅವನ್ನು ಇಟ್ಟುಕೊಂಡು ಓದಬೇಕು ಎಂದು ನೀವು
ಪ್ರಶ್ನಿಸಬಹುದು. ಈ ವಚನದ ಎರಡನೆಯ ಸಾಲಿನಲ್ಲಿ 'ಕುಲವೇನೋ ಅವಂದಿರ
ಕುಲವೇನೊ' ? ಎಂಬುದರ ಮುಂದೆ ಪ್ರಶ್ನಾರ್ಥಕ ಚಿನ್ಹೆ ಇರುವುದರಿಂದ 'ಕೊಲುವನೇ
ಮಾದಿಗ' ? ಹೊಲಸು ತಿಂಬುವನೇ ಹೊಲೆಯ? ಎಂಬ ಸಾಲುಗಳ ಮುಂದೆಯೂ
ಪ್ರಶ್ನಾರ್ಥಕ ಚಿನ್ಹೆ ಇದ್ದಂತೆಯೇ ಲೆಕ್ಕ. ಕುಲವೇನೋ ಆವಂದಿರ ಕುಲವೇನೋ?

ಬುದರ ಮುಂದೆ ಇದ್ದ ಬಳಿಕ ಕೊಲುವನೇ ಮಾದಿಗ ಮುಂದೆಯಾಗಲೀ ಹೊಲಸು
ಬುವನೇ ಹೊಲೆಯನೆಂಬುದರ ಮುಂದೆ ಆಗಲೀ ಎರಡೆರಡು ಕಡೆ ಇರಬೇಕಾದ್ದಿಲ್ಲ.
ು ಸಾಮಾನ್ಯ ವ್ಯಾಕರಣದ ಒಂದು ಸಾಮಾನ್ಯ ನಿಯಮ.

ಬಸವಣ್ಣನವರ ವಚನಗಳ ಗುಣವೇ ಅಂಥದು! ಒಂದೊಂದು ಸಲ ಅವರು
ಷ್ಟೋ ಸಂಗತಿಗಳನ್ನು ಪ್ರಸ್ತಾಪಿಸದೆ ಕೂಡ ಅದರ ಎಲ್ಲ ವಿವರಗಳನ್ನು ನಮ್ಮ ಮುಂದೆ
ಡಿ ಬಿಟ್ಟಿರುತ್ತಾರೆ. ಅಂಥ ಒಂದು ಗುಣವನ್ನು ನಾವು ಅವರ ಮೇಲಿನ ವಚನದಲ್ಲಿ
ೋಡಬಹುದು. 'ಕೊಲುವನೇ ಮಾದಿಗ? ಹೊಲಸು ತಿಂಬುವನೇ ಹೊಲೆಯ'?
ದು ಬಸವಣ್ಣನವರು ಪ್ರಶ್ನೆ ಮಾಡುವ ಮೂಲಕ ಅದರ ಉತ್ತರದ ಕಡೆಗೂ ಬೆರಳು
ಡಿದ್ದಾರೆ. ಮೇಲುನೋಟಕ್ಕೆ ಈ ವಚನದಲ್ಲಿ ಬರೀ ಪ್ರಶ್ನೆಗಳಿವೆ. ಆದರೆ ಆ ಪ್ರಶ್ನೆ
ಒಡಲಲ್ಲಿ ಅವುಗಳ ಉತ್ತರಗಳೂ ಇವೆ. ಬಸವಣ್ಣನವರ ವಚನಗಳಲ್ಲಿ ಹುದುಗಿರುವ
ೇಕ ಶ್ರೇಷ್ಠಗುಣಗಳಲ್ಲಿ ಇದೂ ಒಂದು. ಅದರಂತೆ ಸದರಿ ಪ್ರಶ್ನೆಗಳಿಗೆ ಕೂಡ ಅವರು
ಲ್ಲಿ ಉತ್ತರ ಕೊಟ್ಟಿದ್ದಾರೆ. ಅಥವಾ ಅದರತ್ತ ಬೆರಳು ಮಾಡಿ ತೋರಿದ್ದಾರೆ. ಮಾದಿ
ು ಪ್ರಾಣಿಗಳನ್ನು ಕೊಲ್ಲುವುದಿಲ್ಲವಾದರೆ ಅವುಗಳನ್ನು ಕೊಲ್ಲುವವರು ಬೇರೆ ಯಾರು?
ೊಲೆಯರು ಮಾಂಸವನ್ನು ತಿನ್ನುವುದಿಲ್ಲವಾದರೆ ಅದನ್ನು ತಿನ್ನುವವರು ಬೇರೆ ಮತ್ತೆ
ಾರು? ಎಂಬುದನ್ನು ಇಲ್ಲಿ ಥಟ್ಟನೆ ದೃಗೋಚರಗೊಳಿಸಿ ಬಿಟ್ಟಿದ್ದಾರೆ.

ಇದು ನಿಮಗೆ ವಿಚಿತ್ರವಾಗಿ ಕಾಣಬಹುದು. ಇದು ಇನ್ನೂ ಸ್ಪಷ್ಟವಾಗ
ಕಾದರೆ ಬಸವಣ್ಣನವರ ವಚನಗಳ ಮತ್ತೊಂದು ಗಮನಾರ್ಹ ಅಂಶದ ಕಡೆ ಲಕ್ಷ್ಯ
ಸಬೇಕಾದ್ದು ಅಗತ್ಯ. ನಮಗೆ ಇಂದು ಅವರು ಬರೆದ ಸಹಸ್ರಾರು ವಚನಗಳು
ಸಲಬ್ಧವಿವೆ. ಅವೆಲ್ಲವೂ ಮೇಲು ನೋಟಕ್ಕೆ ಒಂದೊಂದು ಪ್ರತ್ಯೇಕ ಘಟಕಗಳಂತೆ
ೋರುತ್ತವೆ. ವಿಚಾರಿಸಿ ನೋಡಿದರೆ ಆ ಎಲ್ಲ ಸಮಸ್ತ ವಚನಗಳಲ್ಲಿ ಹರಿದ ವಿಚಾರ
ರೆ ಒಂದೇ ಆಗಿದ್ದು ಅಂದು ಅವರು ರಚಿಸಿ ಹೋದ ಆ ವಚನ ಮಹಾಕಾವ್ಯದ
ದೊಂದು ಬಿಡಿನುಡಿಗಳಾಗಿ ಕಂಡು ಬರುತ್ತವೆ. ಆದ್ದರಿಂದ ಅವರ ಒಂದೊಂದು
ಚನಗಳನ್ನು ಓದುವಾಗಲು ಸಹ ನಾವು ಅ ವಚನವೊಂದನ್ನಷ್ಟೇ ಬಿಡಿಯಾಗಿ ಇಟ್ಟು
ಂಡು ಓದದೇ ಅವರ ವಚನ ಮಹಾಕಾವ್ಯದ ಇಡೀ ವಿಚಾರಧಾರೆಯ ಹಿನ್ನೆಲೆ
ನ್ನು ನಮ್ಮ ಗಮನದಲ್ಲಿ ಇಟ್ಟುಕೊಂಡು ಓದಬೇಕು. ಅಂದಾಗ ಮಾತ್ರ ಅವುಗಳ
ಯಾದ ಅರ್ಥಗೊತ್ತಾಗುತ್ತದೆ. ಮಾತ್ರವಲ್ಲ ಅವರ ವಚನಗಳಲ್ಲಿ ಬರುವ ವಚನ
ದ ವಚನಕ್ಕೆ ಇರುವ ಸಾಂಗತ್ಯ ಸಂಬಂಧ ಕೂಡ ತಿಳಿದು ಬರುತ್ತದೆ. ಬಸವಣ್ಣ
ರು ಈ ವಚನ ಮಹಾಕಾವ್ಯ ಎಷ್ಟೊಂದು ಗಹನ ಗಂಭೀರವೆಂದರೆ ಯಾವುದೋ
ದು ವಚನದಲ್ಲಿ ಎತ್ತಿದ ಸಮಸ್ಯೆಯನ್ನು ಅವರು ತಾವಾಗಿಯೇ ಮತ್ತೆ ಇನ್ನಾವುದೋ
ಚನದಲ್ಲಿ ಅದನ್ನು ಪ್ರಸ್ತಾಪಿಸಿ ಅದರ ಅರ್ಥವನ್ನು ನಿಚ್ಚಳಗೊಳಿಸಿ ಬಿಡುತ್ತಾರೆ.

ಅದರಂತೆ 'ಕೊಲುವನೇ ಮಾದಿಗ? ಹೊಲಸು ತಿಂಬುವನೇ ಹೊಲೆಯ
ಎಂದು ಪ್ರಶ್ನಿಸಿರುವ ವಚನದ ಉತ್ತರವನ್ನು;

"ಹೊಲೆಯೊಳಗೆ ಹುಟ್ಟಿ ಕುಲವನರಸುವ
ಎಲವೋ ಮಾತಂಗಿಯ ಮಗ ನೀನು!
ಸತ್ತುದನೆಳೆವ ಎತ್ತಣ ಹೊಲೆಯ?
ಹೊತ್ತು ತಂದು ನೀವು ಕೊಲುವಿರಿ.
ಶಾಸ್ತ್ರವೆಂಬುದು ಹೋತಿಂಗೆ ಮಾರಿ
ವೇದವೆಂಬುದು ನಿಮಗೆ ತಿಳಿಯದು
ನಮ್ಮ ಕೂಡಲ ಸಂಗನ ಶರಣರು
ಕರ್ಮವಿರಹಿತರು, ಶರಣಸನ್ನಿಹಿತರು, ಅನುಪಮ ಚರಿತ್ರರು
ಅವರಿಗೆ ತೋರಲು ಪ್ರತಿಯಿಲ್ಲವೋ"

ಎಂಬ ಈ ವಚನದಲ್ಲಿ ಕೊಡಮಾಡಿದ್ದಾರೆ. ಈ ವಚನದ ಆರಂಭವೇ ಒಂ
ವಿಶಿಷ್ಟ ರೀತಿಯಲ್ಲಿದೆ. ಯಾರಿಗಾಗಿ ಅಥವಾ ಯಾರನ್ನು ಮನಸ್ಸಿನಲ್ಲಿಟ್ಟುಕೊಂ
ಈ ವಚನವನ್ನು ಬರೆದಿದ್ದಾರೋ ಅವರನ್ನೇ ನೇರವಾಗಿ.

ಹೊಲೆಯೊಳಗೆ ಹುಟ್ಟಿ ಕುಲವನರಸುವ
ಎಲವೋ ಮಾತಂಗಿಯ ಮಗ ನೀನು !

ಎಂದು ಮೂದಲಿಸುತ್ತಾ ಅವರ ಹುಟ್ಟನ್ನು ಅವರಿಗೆ ನೆನಪಿಸುತ್ತಾ 'ಹೊ
ಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ" ಎಂಬ ಸತ್ಯವನ್ನು ಅವರಿಗೆ ಮನಗಾಣಿ
ಕೊಡುತ್ತಾರೆ. ಯಾರು ಶ್ರೇಷ್ಠರು? ಮತ್ತು ಯಾರು ಕನಿಷ್ಠರು? ಎಂಬುದ
ಅವರವರು ಆಚರಿಸುವ ಕ್ರಿಯೆಗಳೇ ಮಾನದಂಡಗಳಾಗಬಲ್ಲವು ಎಂಬುದನ್ನು ಮುಖ
ಹೊಡೆದಂತೆ ಸತ್ತುದ ನೆಳೆವ ಎತ್ತಣ ಹೊಲೆಯ"? ಎಂದು ಅವರನ್ನು ಪ್ರಶ್ನಿಸುತ್ತಾ
ನಿಜಕ್ಕೂ ಅವನು ಸತ್ತಿದ್ದ ಪ್ರಾಣಿಯನ್ನು ಊರಿನಿಂದ ಆಚೆ ಹೊತ್ತುಕೊಂಡೊಯ
ಉಪಕಾರ ಮಾಡಿದ. ಇಲ್ಲದೇ ಹೋಗಿದ್ದರೆ ಊರೆಲ್ಲ ಹೊಲಸು ನಾರುತಿತ್ತು. ಅ
ಅವನು ಊರಿನ ಜನರಿಗೆ ಮಾಡಿದ ಒಂದು ಮಹೋಪಕಾರ. ಇದಕ್ಕಾಗಿ ಅವನಿ
ಎಲ್ಲರೂ ಕೃತಜ್ಞರಾಗಿರ ಬೇಕಾದದ್ದು ಅಗತ್ಯ. ಅದು ಬಿಟ್ಟು ಅವನನ್ನು ಹೊಲೆ
ಎಂದು ಮೂದಲಿಸುವುದು ಎತ್ತಣ ಮಾತು? ಆ ಮೇಲೆಯೂ ಸಹ ಅವನು ಆ ಸ
ಪ್ರಾಣಿಯ ಚರ್ಮವನ್ನು ಸುಲಿದು ಆ ಮೂಲಕವೂ ಸಾಧ್ಯವಾಗಬಹುದಾದ ಕಾಯಕ
ಜೀನಸುಗಳನ್ನು ಮಾಡಿದ. ಸಿದ್ದಲಿಗೆಗಳನ್ನೋ ಪಾದರಕ್ಷೆಗಳನ್ನೋ ತಯಾರ

ಳಿದವರೆಲ್ಲರ ನೆರವಿಗೆ ಬಂದ. ಶಿವಕೊಟ್ಟ ಯಾವ ವಸ್ತುವೂ; ಅದು ಸತ್ತ
ಪ್ರಾಣಿಯ ಹೆಣವೇ ಆಗಿದ್ದರೂ ಅದು ವ್ಯರ್ಥವಾದುದಲ್ಲ ಎಂಬುದನ್ನು ಸಿದ್ಧಮಾಡಿ
ಟ್ಟ. ಇಂಥ ಪವಿತ್ರ ಕಾಯಕಮಾಡುವ ವ್ಯಕ್ತಿಯನ್ನು ಹೊಲೆಯನೆಂದು ಹೇಗೆ
ಳುತ್ತೀರಿ ? ಎಂಬುದು ಬಸವಣ್ಣನವರ ಪ್ರಶ್ನೆ.

ಮುಂದಿನ ಸಾಲಿನಲ್ಲಂತೂ ಇನ್ನಷ್ಟು ಮೊನಚಾಗಿ ತಿವಿಯುತ್ತಾರೆ. 'ಹೊತ್ತು
ದು ನೀವು ಕೊಲುವಿರಿ ? ಎಂಬ ಮಾತನ್ನು ಯಾರಿಗೆ ಉದ್ದೇಶಿಸಿ ಹೇಳಿದ್ದಾರೆಂಬು
ನ್ನು ಇಲ್ಲಿ ಬಿಡಿಸಿ ಹೇಳುವ ಅಗತ್ಯವಿಲ್ಲ. ಜೀವಂತ ಪ್ರಾಣಿಗಳನ್ನೇ ಯಜ್ಞ ಯಾಗ
ಂತಾದ ಕರ್ಮಕಾಂಡದ ಹೆಸರಿನಲ್ಲಿ ಹೊತ್ತು ತಂದು ಕೊಲ್ಲುವವರು ನೀಚರೋ
ತ್ತ ಪ್ರಾಣಿಗಳನ್ನು ಊರ ಹೊರಗೆ ಹೊತ್ತೊಯ್ದು ಉಪಕಾರ ಮಾಡುವವರು
ಚರೋ ? ನೀವೇ ನೋಡಿ ಎಂದು ಎರಡರ ಚಿತ್ರವನ್ನು ನಮ್ಮ ಕಣ್ಣಮುಂದೆ ಇಲ್ಲಿ
ಡಿದು ತೋರುತ್ತಾರೆ.

ಹಾಗಾದರೆ ಅಂದು ಪ್ರಾಣಿಗಳನ್ನು ಯಾರು ಕೊಲ್ಲುತ್ತಿದ್ದರು ? ಮತ್ತು ಹಾಗೆ
ಂದ ಪ್ರಾಣಿಯ ಮಾಂಸವನ್ನು ಯಾರು ತಿನ್ನುತ್ತಿದ್ದರು? ಈ ಪ್ರಶ್ನೆಗಳಿಗೆ ಬಸವಣ್ಣ
ರ ಸ್ಪಷ್ಟ ಉತ್ತರ ಇಂತಿದೆ.

> ಏನಯ್ಯಾ, ವಿಪ್ರರು ನುಡಿದಂತೆ ನಡೆಯರು; ಇದೆಂತಯ್ಯಾ
> ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ !
> ಕೂಡಲಸಂಗಮದೇವಯ್ಯಾ ಹೊಲೆಯರ ಬಸುರಲ್ಲಿ

ವಿಪ್ರರು ಹುಟ್ಟಿ ಗೋಮಾಂಸವ ತಿಂಬರೆಂಬುದಕ್ಕೆ ಇದೆ ದೃಷ್ಟ ಎಂಬ ಈ ವಚನದಲ್ಲಿ
ಂದಿನ ವಿಪ್ರರ ಚಟುವಟಿಕೆಗಳೇನೆಂಬುದನ್ನು ಚೆನ್ನಾಗಿ ವಿವರಿಸಿದ್ದಾರೆ. ಯಜ್ಞ
ಯಾಗಾದಿಗಳ ಹೆಸರಿನಲ್ಲಿ ಪ್ರಾಣಿಗಳನ್ನು ಕೊಲ್ಲುತ್ತಿದ್ದರು ಹಾಗೂ ಅವುಗಳ ಮಾಂಸ
ನ್ನು ತಿನ್ನುತ್ತಿದ್ದರು.

ಈಗ ನಿಮಗೆ 'ಕೊಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ ?
ಂದು ವಚನದ ಸಾಲುಗಳ ಅರ್ಥ ತಂತಾನೇ ಹೊಳೆದಿರಬೇಕು-ಅಲ್ಲವೇ ?

---

—ಡಾ. ಶ್ರೀಮತಿ ಗಂಗಮ್ಮ
ಸತ್ಯಂಪೇಟೆ, ದಿಗ್ಗಿ ಬಿಲ್ಡಿಂಗ್, ಶಹಪುರ-585223, ಗುಲಬರ್ಗಾ-ಜಿಲ್ಲೆ.

# ಧಾರ್ಮಿಕ ಕ್ರಾಂತಿಕಾರಿ ಬಸವಣ್ಣ

“ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ”
“ಮನವರಳಿ ಮಾತರಳಿ ಮತಿಯರಳಿ
ಮಿತವರಿತು ಘನತತ್ವ ನುಡಿದಿರೀ ಶರಣರೆಲ್ಲ”
ತನಗಿಂತ ಪರನು ಮೇಲೆಂಬುದನೇ
ಮೇಲೆನಿಪ ಹರಶರಣ ಜನರಲ್ಲಿ
ಮೇಲು ಕೀಳಹುದೇ ಧರಿಸಿರಲು
ಲಿಂಗವನು ಕಾಲ ಭೇದವಿಹುದೇ
ಪರಮಶಿವ ಭಕ್ತರಿಗೆ ಜಾತಿ ಕುಲವೊಂದೇ
ಹರಳನರಿತಿರ್ಪ ಪರತತ್ವ ಮಿಂತೆಂದೆ”

ತನಗಿಂತ ಮೇಲೆ ಪರನು ಎಂದು ಎಷ್ಟು ಜನರಿಗೆ ಹೇಳಲು ಸಾಧ್ಯ. ಅ
ಭುವಿಯ ಶಬ್ದ ಕೋಶದಲ್ಲಿ ಮೇಲಿನ ಪದಗಳನ್ನು ಹಣತೆ ಹಚ್ಚಿಕೊಂಡು ಹುಡು
ಬೇಕಷ್ಟೆ.

ಜಾತಿ ಧರ್ಮಗಳ ಭೇದ ಭಾವಗಳನ್ನು ಚತುರ ರಾಜಕಾರಣಿಗಳು ಕುಯು
ಯಿಂದ ಸ್ವಲಾಭಕ್ಕಾಗಿ ಬಳಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಸಮಾಜ ಜೀವ
ನೈತಿಕ ನೆಲೆ ವೇಗವಾಗಿ ಕುಸಿಯುತ್ತಿದೆ. ಹಾಗೆಯೇ 21 ನೇ ಶತಮಾನದ ಸನಿಹ
ಗುತ್ತಿರುವಂತೆ ಈಗ ಆಧುನಿಕ ತಂತ್ರ ಜ್ಞಾನ ಜನರಲ್ಲಿ ಬೆಳೆಸುತ್ತಿರುವ ಲೋಭ ಮ
ಸ್ವಾರ್ಥಗಳಿಂದ ಮನುಷ್ಯಕುಲ ಅವನತಿಯ ಹಾದಿಯನ್ನು ಹಿಡಿದಿರುವಂತೆ ತೋ
ತ್ತಿದೆ. ಮುಂದಿನ ಭವಿಷ್ಯ ಕುರಿತು ಎಲ್ಲೆಡೆ ಮಂಕು ಆವರಿಸಿರುವಾಗ ಸಮಾಜ
ಇನ್ನು ಪರಂಪರಾಗತ ಧಾರ್ಮಿಕ ಮೌಲ್ಯಗಳನ್ನು ಕಾಪಾಡಲು ಹೆಣಗಿದ ಧಾಮಿ
ಯುಗ ಪುರುಷರನ್ನು ನೆನಸಿಕೊಂಡು ಪ್ರಸ್ತುತ ಪರಿಸ್ಥಿತಿಯನ್ನು ನಿರೀಕ್ಷಿಸುವು
ಅತ್ಯವಶ್ಯಕವೆನಿಸುತ್ತದೆ.

ಪವಿತ್ರವಾದ ಜೀವನ ಮಾರ್ಗಕ್ಕಾಗಿ ಪ್ರತಿಪಾದಿಸಿದ ವಿಶ್ವಧರ್ಮಿ ಬಸವ
ನವರ ಬಗ್ಗೆ ಅವಲೋಕಿಸುವುದು ಸಾಮಾನ್ಯಸ್ಥರಳಾದ ನನಗೆ ಕಠಿಣ ಸಮಸ್ಯೆಯಾದ
ಪ್ರಯತ್ನದ ಮೂಲಕ ಮೌಲ್ಯಗಳನ್ನು ಅರಿತುಕೊಂಡು ಹೊಸದೇನಾದರ ಬ
ವಿಚಾರ ಮಾಡುವುದಕ್ಕಿಂತ ಇದ್ದ ಸುಧಾರಕ ತತ್ವಗಳನ್ನು ಅರಿತುಕೊಳ್ಳ ಬಹುದ

"ಹಿಂದು ಮುಂದುಗಳ ಒಂದು ಕೇಂದ್ರಕೆ
ತಂದುಕೊಂಡು ನೆಲೆ ನಿಂತವರು
ಹಗಲಿರುಳಿನ ಋತು ಮಾಸಾದಗತಿಯೊಳು
ಮರಳಿ ಮರಳಿ ಹೊಸತಾಗುವರು
ಹಣ್ಣು ಕಾಯಿಗಳಲ್ಲಿ ನಾಳಿನ ಕನಸಿನ ಬೀಜವ
ಹುಟ್ಟಿಸಿ ಇಟ್ಟವರು
ಹಳೆಯ ಮೊಗಗಳ ಒಂದೇ ಗಾಳಿಗೆ ತೂರುತ
ಭರವಸೆಗೊಲಿದವರು"

ಸಮಾಜದೊಳಗಣ ಮೌಢ್ಯ ಅನ್ಯಾಯಗಳ ವಿರುದ್ಧ ಬಸವಣ್ಣನವರು ಅಖಂಡ ಹೋರಾಟ ನಡೆಸಿದರು. ಅವರ ಧೈರ್ಯ ಸ್ಥಿರತೆಗಳ ಹೋರಾಟದ ಚಿತ್ರಣದಲ್ಲಿ ನಾವು ಕಾಣುವುದೇನೆಂದರೆ ಇಂದಿಗಿಂತಲೂ ಕಟ್ಟುಪಾಡುಗಳ ಬಹಳ ಬಿಸಿಯಾಗಿದ್ದ ಅಂದಿನ ಸನ್ನಿವೇಶ ಪರಿಸ್ಥಿತಿಗಳಲ್ಲಿ ಬಸವಣ್ಣನವರ ದಿಟ್ಟ ಹೋರಾಟ ಆಶ್ಚರ್ಯಕರವಾದುದು. ಕಲ್ಪಿಸಲು ಕೂಡ ಅಶಕ್ಯವಾದುದು. ಇಂದಿನ ಕಾಲದಲ್ಲಿ ಅಂತಹ ಹೋರಾಟಕ್ಕೆ ಎಷ್ಟು ಜನ ಸಿದ್ಧರಿದ್ದಾರೆ? ಬಸವಣ್ಣನವರ ಕಾಲದಲ್ಲಿ ಇದ್ದಂತೆ ಇಂದೂ ವಿಷಮತೆ ತಾಂಡವಾಡುತ್ತಿದೆ. ಮೊದಲಿನಿಂದಲೂ ವೈದಿಕ ಸಮಾಜದೊಡನೆ ಹೊರಗಿನಿಂದಲೂ ಒಳಗಿನಿಂದಲೂ ಘರ್ಷಣೆಗಳು ನಡೆಯುತ್ತಲೇ ಬಂದಿದೆ. ಆದರೂ ಅದು ಒಳ್ಳೆಯ ಸಮಾಜವಾಗಿ ವ್ಯವಸ್ಥೆಗೊಂಡಿಲ್ಲ. ಇನ್ನೂ ಅನೇಕ ಮೌಢ್ಯಗಳು ಅನ್ಯಾಯಗಳು ಜಟಿಲ ಸಮಸ್ಯೆಗಳು ಅದರಲ್ಲಿ ಉಳಿದುಕೊಂಡಿವೆ. ಯಾಕೆ ಇವುಗಳನ್ನು ಹೋಗಲಾಡಿಸುವಲ್ಲಿ ನಾವು ಇಂದಿಗೂ ಅಸಮರ್ಥರಾಗಿದ್ದೇವೆ. ಇದುಯೋಚಿಸ ಬೇಕಾದ ಗಂಭೀರ ಸಮಸ್ಯೆ.

ಈ ದಿಶೆಯಲ್ಲಿ ಹೆಚ್ಚಿನ ವಿಚಾರ, ಸ್ಫೂರ್ತಿ ಬಸವಣ್ಣನವರಿಂದ ನಮಗೆ ದೊರೆಯುತ್ತದೆ. ನಮ್ಮ ಸಮಾಜದಲ್ಲಿ ಬೇರೂರಿರುವ ಢಾಂಬಿಕತನ ವಿರೋಧಾಭಾಸ ವಿಸಂಗತಗಳನ್ನು ನಾವು ಹೋಗಲಾಡಿಸಲೂ ಹೆಣಗ ಬೇಕಾಗಿದೆ. ಇದರಲ್ಲಿ ಬಸವಣ್ಣನವರ ದಂಗುಗೊಳಿಸವ ಕ್ರಾಂತಿ ವಿನಯಕಳಕಳಿಗಳು ನಮಗೆ ಮಾರ್ಗದರ್ಶನ ಮಾಡುತ್ತವೆ. ಬಸವಣ್ಣನವರನ್ನು ಯಾವುದೇ ದೃಷ್ಟಿಕೋನದಿಂದ ನೋಡಿದರೂ ಅವರೊಬ್ಬ ಬಹು ಎತ್ತರವಾದ ವಿಚಾರಧಾರೆಯ ವ್ಯಕ್ತಿಗಳಾಗಿ ಕಾಣುತ್ತಾರೆ. ಅವರು ಸಾಮಾಜಿಕವಾಗಿ ಆರ್ಥಿಕವಾಗಿ, ಆಧ್ಯಾತ್ಮಿಕವಾಗಿ, ಸಮಗ್ರ ಭಾರತದ ಬಹುದಿನಗಳ ವಿಚಾರಧಾರೆಯ ದಿಕ್ಕನ್ನೇ ಪರಿಷ್ಕಾರಕ್ಕೊಳಪಡಿಸಿದ ಧೀಮಂತವ್ಯಕ್ತಿ. ಅವರ ವಿಚಾರಧಾರೆಯ ಪ್ರಚಾರ ಯಾವುದೇ ರೀತಿಯಿಂದಲಾದರೂ ವಿಶ್ವಜನಾಂಗಕ್ಕೆ ಆಗಬೇಕಾಗಿದೆ. ಅವರ ಘನೋದ್ದೇಶಭರಿತ ತತ್ವಗಳು ಕಾಲಕಾಲಕ್ಕೂ ನವೀನತಮವಾಗಿದೆ.

ಹಿಂದು ಮುಂದುಗಳನ್ನು ಒಂದು ಕೇಂದ್ರಕೆ ತಂದುಕೊಂಡು ನೆಲೆನಿಂತ ಪುರು
ರವರು. ಹಗಲಿರುಳಿನ ಋತುಮಾಸದ ಗತಿಯಲ್ಲಿ ಮರಳಿ ಮರಳಿ ಹೊಸತಾಗುವ ಮಹ
ಪುರುಷರವರು. ಸರ್ವಾಂಗೀಣ ಸುಂದರವಾದ, **ಆರ್ಥಿಕ, ಧಾರ್ಮಿಕ, ಶೋಷಣೆ ಇಲ್ಲ
ಜಾತಿಯ ಜಂಜಾಟವಿಲ್ಲದ ಕೀಳು ಮೇಲಿಲ್ಲದ ನೈತಿಕ ತಳ ಹದಿಯು ಮೇ
ಮಾನವ ಸಮಾಜವನ್ನು ಕಟ್ಟುವ ಪ್ರಯತ್ನ ವಿಶ್ವಧರ್ಮಿ ಬಸವಣ್ಣನವರದು**

ಬಸವಣ್ಣನವರು ಬಹು ಮುಖ ಪ್ರತಿಭೆಯ ವ್ಯಾಪಕ ಕ್ರಿಯಾಶಕ್ತಿಯ ಮಹ
ಪ್ರವಾದಿಗಳು. **"ಮನುಷ್ಯ ಜಾತಿ ತಾನೊಂದೆ ವಲಂ"** ಎಂಬ ಸೂತ್ರವನ್ನು ನಂ
ಅದರ ಬುನಾದಿಯ ಮೇಲೆ ನಿಜಾರ್ತೀಯ ಸಮಾಜವನ್ನು ಸೃಷ್ಟಿಸುವುದೇ ಅವ
ಧ್ಯೇಯವಾಗಿತ್ತು. ಭರತ ಖಂಡದ ಹಿತ ಪ್ರಗತಿ ಭವಿಷ್ಯಗಳೆಲ್ಲಾ ಆ ಒಂದು ನೆಲಗಟ್ಟಿ
ಮೇಲೆ ನಿಂತಿದೆಯೆಂಬ ಸತ್ಯ ಹನ್ನೆರಡನೇ ಶತಮಾನದ ಪ್ರವಾದಿಗೆ ಸ್ಪಷ್ಟವಾ
ಗೊತ್ತಿತ್ತು. ವಿಶ್ವ ಧರ್ಮ ಸ್ಥಾಪನೆಯೇ ಅವರ ಹೆಗ್ಗುರಿ ಆಗಿತ್ತು.

ಭಾರತವು ಜಗತ್ತಿನಲ್ಲಿಯೇ ಶ್ರೇಷ್ಠವಾದ ನಾಗರಿಕತೆ, ವೇದ, ಉಪನಿಷತ್ತು ಶಾಸ್ತ್ರ
ಗಳನ್ನು ಹೊಂದಿದ್ದರೂ ಕೂಡ ಮಾನವನ ವ್ಯಕ್ತಿ ಜೀವನ ವಿಕಾಸಕ್ಕೆ ಅತ್ಯವಶ್ಯಕವಾದ
ಸರ್ವಸಮಾನತೆ ಬಾಳ್ವೆಯನ್ನು ಅದು ಬೋಧಿಸಿದರೂ ಆಚರಿಸಲಿಲ್ಲ ಎಂಬುದು ಈ
ನಾಗರಿಕತೆಗೆ ಕುಂದು. ಎಲ್ಲಕಿಂತ ಮುಖ್ಯವಾಗಿ ಅಸ್ಪೃಶ್ಯತೆಯ ಕಳಂಕ ಈ ಧರ್ಮದಲ್ಲಿ
ಹೇಗೊ ಬಂದು ಸೇರಿಕೊಂಡಿರುವುದು ಎಲ್ಲಾ ವಿವೇಕಿಗಳಿಗೂ ಮಾನವತೆಯುಳ್ಳ
ವರಿಗೂ ಆಘಾತವೂ ಮನಸ್ಸಿಗೆ ನೋವೂ ಉಂಟಾಗಿದೆ. ಹಿಂದಿನಿಂದಲೂ ಈ ಅಸ್ವಾ
ಭಾವಿಕ ಪದ್ಧತಿಯನ್ನು ಗಮನಿಸಿದ ಸಮಾಜ ಸುಧಾರಕರು ರಾಮಾನುಜಾಚಾರ್ಯರು,
ಬಸವೇಶ್ವರರು ಸಾಧುಸಂತರು ರಾಜಾರಾಮಮೋಹನರಾಯ, ಮಹಾತ್ಮಗಾಂಧಿ,
ಅಂಬೇಡ್ಕರರು ಇವರೆಲ್ಲಾ ತಮ್ಮ ತಮ್ಮ ಕಾಲದಲ್ಲಿ ಈ ರೋಗವನ್ನು ಗುರುತಿಸಿ ಅ
ವ್ಯಾಪಕ ಸಂದೇಶ ತತ್ವಗಳು ನಮ್ಮ ಕಾರ್ಯಚೇತನವಾಗ ಬೇಕು. "ಕಳಬೇಡ, ಕೊಲ
ಬೇಡ, ಹುಸಿಯನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,
ತನ್ನಬಣ್ಣಿಸ ಬೇಡ, ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ" ಈ ವಚನ ತತ್ವದ
ಆಳವನ್ನು ಅಳೆಯಲು ಪ್ರಯತ್ನಿಸಿದಲ್ಲಿ ವೇದೋಪನಿಷತ್, ಭಗವದ್ಗೀತೆಗಳಲ್ಲಿರುವ
ಅನೇಕ ಬೋಧನಾತ್ಮಕ ತತ್ವಗಳನ್ನು ಅತ್ಯಂತ ಸರಳ ಕನ್ನಡದಲ್ಲಿ ಅಬಾಲವೃದ್ಧರಿಗೂ
ಅರ್ಥವಾಗುವ ರೀತಿಯಲ್ಲಿ ಬಸವಣ್ಣನವರು ಬರೆದಿರುತ್ತಾರೆ. ಈ ತತ್ವ ಕೇವಲ ಕರ್ನಾ
ಟಕ ಧರ್ಮಕ್ಕೇ ಸೀಮಿತವಾಗಿಲ್ಲದೇ ಇಡೀ ವಿಶ್ವಧರ್ಮಕ್ಕೆ ಮಾರ್ಗದರ್ಶಕವಾಗಿದೆ.
ಈ ವಿಶ್ವಧರ್ಮ ಸೂತ್ರ ಎಲ್ಲೆಡೆಯಲ್ಲೂ ಪ್ರಸಾರವಾಗಬೇಕು. ಪ್ರಚಾರಣೆಗೆ ತಕ್ಕ ಸಾಧ
ಕರಾದ ಈ ಕರ್ಮಿಷ್ಠರನ್ನು ನೆನೆಸಿಕೊಳ್ಳುವುದು. ಅದರ ಮೂಲಕ ಮಾವವನ ನೈತಿಕ
ಮಟ್ಟವನ್ನು ಅರಿತುಕೊಂಡು ಸಮಾಜದ ಹಿತಕ್ಕಾಗಿ ದೃಷ್ಟಿ ಕೋನ ಬದಲಾಯಿಸ

ೇಕು. ಬಸವಣ್ಣನವರ ಧಾರ್ಮಿಕ ಕ್ರಾಂತಿ ಅನೇಕ ಸುಪ್ತ ವಿಚಾರಗಳನ್ನು ಜಾಗೃತ
ೂಳಿಸಲು ಸಹಾಯಕವಾಗಿದೆ. ಅಂತೆಯೇ ನಮ್ಮ ನಿಲುವಿನ ಉದ್ದೇಶವನ್ನು ಅರಿತು
ೂಳ್ಳಲು ಅವಕಾಶ ಕಲ್ಪಿಸಿದೆ.

ಸಕಲಜೀವಾತ್ಮರಿಗೆ ಲೇಸನೇ ಬಯಸಿದ ಶ್ರೀ ಬಸವಣ್ಣನಂಥವರು ಪದೇ ಪದೇ
ುಟ್ಟಬೇಕು. ಅವರ ನೆನಹು ಇಂದು ನಮ್ಮಲ್ಲಿ ಹೊಸ ದೃಷ್ಟಿಯನ್ನು ಹರಿಯಿಸಲಿ ಬೇಕು.

"ಲೋಭವೆಂಬುದು ಶೋಭೆಯಾಗಿದೆ
ಕ್ಷೋಭೆಯೇ ಬದುಕಾಗಿದೆ
ಬುದ್ಧಿ ಬೆಳೆಯುತ್ತಿಹುದು ಧರ್ಮದ
ಹೀನತಮ ಸಂಸ್ಕಾರಕ್ಕೆ
ಯುದ್ಧವಾಗುತ್ತಿಹುದು ಮಾನವ ಸಂಸ್ಕೃತಿಯ ಸಂಹಾರಕೆ"

ಎಂಬ ಆನಿಸಿಕೆಯನ್ನು ಅಳಿಸಿ ನಮ್ಮ ಸಂಸ್ಕೃತಿ ಮಾನವೀಯತೆಯನ್ನು ಉಳಿಸಿ
ೂಳ್ಳಬೇಕು.

---

ಡಾ|| ಅಹಲ್ಯ ಚಿಂತಾಮಣಿ, 34-ಬಿ, ಮಸ್ಜಿದ್ ಮೋಠ, ಡಿ.ಡಿ. ಎ. ಫ್ಲಾಟ್ಸ್,
ನ್ಯೂ ಡೆಲ್ಲಿ-48 (110048)

# ಪಂಚಾಚಾರಗಳು

ವೀರಶೈವರಲ್ಲಿ ನೀತಿ ಪ್ರಧಾನವಾದ ಐದು ಆಚಾರಗಳನ್ನು 'ಪಂಚಾಚಾರ' ಎ
ಕರೆಯುತ್ತಾರೆ. ಬಸವಣ್ಣನವರ ಒಂದು ವಚನದಲ್ಲಿ ಈ ತತ್ವ ಪ್ರತಿಪಾದಿತವಾಗಿದೆ.

"ಕಳಬೇಡ ಕೊಲಬೇಡ, ಹುಸಿಯನುಡಿಯಲುಬೇಡ,
ಪರರ ನಿಂದಿಸಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ,
ಇದೇ ಅಂತರಂಗಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲ ಸಂಗಮದೇವ ನೊಲಿಸುವಪರಿ.

ಎಂದು ಹೇಳಿದ್ದಾರೆ. ಈ ವಚನವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪಂಚಾಚಾರ
ಗಳ ಸ್ವರೂಪ ವಿಧಿತವಾಗುತ್ತದೆ. ವೀರಶೈವರಿಗೆ ಅಷ್ಟಾವರಣವೆ ಅಂಗ ಪಂಚಾಚಾರ
ಪ್ರಾಣ, ಷಟ್‌ಸ್ಥಲವೇ ಆತ್ಮ ಎಂದು ಅನುಭಾವಿಗಳ ಅಭಿಪ್ರಾಯವಾಗಿದೆ. ಸಾಧ
ಬಹಿರಂಗ ಶುದ್ಧಿಗಾಗಿ ಪಂಚಾಚಾರಗಳು, ಅಂತರಂಗಶುದ್ಧಿಗಾಗಿ ಸಪ್ತಾಚಾರಗ
(ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರ, ಸತ್ಯಾಚಾರ, ನಿತ್ಯಾಚಾರ, ಧರ್ಮ
ಚಾರ, ಸರ್ವಾಚಾರ) ಕಲ್ಪಿತವಾಗಿವೆ. ಪಂಚಾಚಾರ ಮತ್ತು ಸಪ್ತಾಚಾರಗ
ಸಾಧಕನ ಅಂತರ್ಬಾಹ್ಯ ಜೀವನಕ್ರಮ ಸೂತ್ರಗಳಾಗಿದ್ದರೂ ಅವು ಒಂದಕ್ಕೊಂ
ಪೂರಕವಾಗಿವೆ.

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ. ಭೃತ್ಯಾಚಾರ ಈ ಐ
ಆಚಾರಗಳೇ ಪಂಚಾಚಾರಗಳು. ಇವನ್ನು ಕುರಿತು ಚನ್ನಬಸವಣ್ಣನವರು ಹೀ
ಹೇಳುತ್ತಾರೆ

"ಅಯ್ಯಾ ಶ್ರೀಗುರು ಕರುಣಿಸಿಕೊಟ್ಟ ಲಿಂಗ ಜಂಗಮವಲ್ಲದೆ,
ಅನ್ಯದೈವಂಗಳ ತ್ರೈಕರಣದಲಿ ಅರ್ಚಿಸದಿರ್ಪುದೆ ಲಿಂಗಾಚಾರವೆಂಬೆನಯ
ಭಕ್ತನಾದೊಡೆ ಸತ್ಯಶುದ್ಧ ಕಾಯಕಮಾಡಿ,
ಮಹೇಶ್ವರನಾದಡೆ ಸತ್ಯ ಶುದ್ಧ ಭಿಕ್ಷವ ಬೇಡಿ
ಸಮಸ್ತ ಪ್ರಾಣಿಗಳ ಪಾತ್ರಾಪಾತ್ರಾವ ತಿಳಿದು,
ಹಸಿವು ತೃಷೆಶೀತಕ್ಕೆ ಪರಹಿತಾರ್ಥಿಯಗಿರ್ಪುದೆ ಸದಾಚಾರವೆಂಬೆನಯ್ಯಾ.
ಗುರುಮಾರ್ಗಾಚಾರದಲ್ಲಿ ನಿಂದ ಶಿವಲಾಂಛನಧಾರಿಗಳೆಲ್ಲ
ಪರಶಿವಲಿಂಗವೆಂದು ಭಾವಿ
ಅರ್ಥ ಪ್ರಾಣಾಭಿಮಾನವನರ್ಪಿಸುವುದೆ ಶಿವಾಚಾರ ವೆಂಬೆನಯ್ಯ
ಅಷ್ಟಾವರಣಗಳ ಮೇಲೆ ಅನ್ಯರಿಂದ ಕುಂದು ನಿಂದೆಗಳು ಬಂದು ತಟ್ಟಿದಲ್ಲಿ

ಗಣ ಸಮೂಹವ ನೊಡಗೂಡಿ ಆಸ್ಥಲವ ತ್ಯಜಿಸುವುದೆ ಗಾಣಾಚಾರ
ವೆಂಬೆನಯ್ಯಾ

ಜಾತ್ರಾಶ್ರಮ ಕುಲಗೋತ್ರನಾಮರೂಪು ಕ್ರಿಯೂರಹಿತನಾಗಿ
ಗುರೂಪಾವಸ್ಥೆಯಿಂದ ಗುರುವ ಪ್ರತ್ಯಕ್ಷವ ಮಾಡಿ,
ಆ ಗುರುವಿನಿಂದ ಚಿದ್ಘನ ಮಹಾಲಿಂಗವ ಪಡೆದು
ಆ ಲಿಂಗ ಸಹಿತವಾಗಿ ಭಕ್ತಿಜ್ಞಾನ ವೈರಾಗ್ಯ ಪಾದೋದಕ
ಪ್ರಸಾದ, ವಿಭೂತಿ ರುದ್ರಾಕ್ಷಿ, ಮಂತ್ರ ಮೊದಲಾದ
ಷಟ್‌ಸ್ಥಲ ಮಾರ್ಗದಲ್ಲಿನಿಂದ ಭಕ್ತ ಗಣಂಗಳಲ್ಲಿ ಪಂಚ
ಸೂತಕಂಗಳ ಕಲ್ಪಿಸದೆ,
ಅವರಿಂದ ಸ್ಥಲಕ್ಕೆ ಹೋಗಿ ತನು ಮನ ಧನಂಗಳ ಸಮರ್ಪಿಸಿ
ಅವರೊಕ್ಕು ಮಿಕ್ಕದ ಹಾರೈಸಿ, ಹಸ್ತಾಂಜಲಿತರಾಗಿ
ಪ್ರತ್ಯುತ್ತರ ಕೊಡದಿರ್ಪುದೆ ಭೃತ್ಯಾಚಾರ ವೆಂಬೆನಯ್ಯಾ"

ಈ ರೀತಿಯು ಪಂಚಾಚಾರಗಳಲ್ಲಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭತೀೂ, ರುದ್ರಾಕ್ಷಿ ಮಂತ್ರಗಳ ಅರಿವು ಸಂಪೂರ್ಣವಾಗುತ್ತದೆ. ಈ ಅರಿವಿನಿಂದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಾಸಾದಗಳ ಪೂರ್ವಾಶ್ರಯವನ್ನು ಸಂಪೂರ್ಣವಾಗಿ ಕಳೆಯುತ್ತಾನೆ. ಪಂಚಾಚಾರಗಳಲ್ಲಿ ಅಷ್ಟಾವರಣಗಳ ಸಂಪೂರ್ಣ ಜ್ಞಾನ ವಾಗುತ್ತದೆ.

ಆದರೆ ಆ ಜ್ಞಾನ ಸಾಧಕನ ಆಚರಣೆಯಲ್ಲಿ ಇನ್ನೂ ಸಂಪೂರ್ಣವಾಗಿ ಲೀಯವಾಗಿರುವುದಿಲ್ಲ. ಸಕ್ಕರೆ ಹಾಲಿನಲ್ಲಿ ಕರಗುವಂತೆ ಜ್ಞಾನವು ಆಚರಣೆಯಲ್ಲಿ ಬೆರತು ಜ್ಞಾನಾಚರಣೆಯ ಸಮರವಾಗುವುದು. ಪಂಚಾಚಾರದಿಂದ ಉಂಟಾದ ಅಷ್ಟಾವರಣದ ಜ್ಞಾನ, ಸಾಹಿತ್ಯ ಸಪ್ತಾಚಾರದಲ್ಲಿ ಮಿಲನಹೊಂದಿ ಸದ್ಭಕ್ತರ ಸಕ್ರಿಯಾಚರಣೆಯಿಂದ ಸಿದ್ಧನಾಗುತ್ತಾನೆ. ಮೊದಲು ಅಷ್ಟವಿಧಾರ್ಚನೆ, ಷೋಡಶೋಪಚಾರದಲ್ಲಿ ಗುರುಲಿಂಗ ಜಂಗಮವನರ್ಚಿಸಿ ಘನವಾದ ತೀರ್ಥದಲ್ಲಿಮಿಂದು ಕ್ರಿಯಾಚಾರಿಯಾಗುತ್ತಾನೆ. ಆಗ ಅವನು ಆಚಾರಲಿಂಗ ಸಂಬಂಧಿಯಾಗಿ ಭಕ್ತಸ್ಥಲದಲ್ಲಿರುತ್ತಾನೆ. ಸತ್ಯ ನಡೆ ನುಡಿಯುಳ್ಳ ಶಿವಶರಣರ ಅನುಭವದ ಆಳವನ್ನರಿಮ ಜ್ಞಾನಾಚಾರಿಯಾಗುತ್ತಾನೆ. ಅಗ ಅವನು ಗುರುಲಿಂಗ ಸಂಬಂಧಿಯಾಗಿ ಮಹೇಶ್ವರ ಸ್ಥಲದಲ್ಲಿರುತ್ತಾನೆ. ಶರಣಾನುಭವದ ಬೆಳಕಿನಲ್ಲಿ ತನ್ನ ಗುಣಾವಗುಣಗಳನ್ನು ಸ್ವಾನುಭಾವದಿಂದರಿತು ಸದ್ಗುಣಿಯಾಗಿ ಭಾವಾಚಾರಿಯಾಗುತ್ತಾನೆ. ಆಗ ಅವನು ಶಿವಲಿಂಗ ಸಂಬಂಧಿಯಾಗಿ ಪ್ರಸಾದ ಸ್ಥಲದಲ್ಲಿರುತ್ತಾನೆ. ಪ್ರಾಣಾಂತ್ಯ ಬಂದರೂ ತನ್ನ ಸದ್ಗುಣ ಬಿಡದೆ ನುಡಿದಂತೆ ನಡೆದು ಸತ್ಯಾಚಾರಿಯಾಗುತ್ತಾನೆ ಆಗ ಅವನು ಜಂಗಮ ಲಿಂಗ ಸಂಬಂಧಿಯಾಗಿ ಪ್ರಾಣಲಿಂಗ ಸ್ಥಲದಲ್ಲಿರುತ್ತಾನೆ. "ತಾನೆ ಸತಿ ಲಿಂಗಪತಿ" ಎಂಬ ಸಂಬಂಧದಿಂದುಂಟಾದ

ಪರಿಣಾಮ ಪ್ರಸಾದದಲ್ಲಿ ಸದಾ ಲೋಲುಪ್ತನಾಗಿ ನಿತ್ಯಾಚಾರಿಯಾಗುತ್ತಾನೆ. ಆ
ಅವನು ಪ್ರಸಾದ ಲಿಂಗ ಸಂಬಂಧಿಯಾಗಿ ಶರಣ ಸ್ಥಲದಲ್ಲಿರುತ್ತಾನೆ. ಪಾದೋದ
ಪ್ರಸಾದ ಮತ್ತು 'ಓಂ ನಮಃ ಶಿವಾಯ' ಎಂಬ ಮಂತ್ರದಲ್ಲಿ ತಾದಾತ್ಮ್ಯಹೊಂ
ಧರ್ಮಾನುಚಾರಿಯಾಗುತ್ತಾನೆ. ಆಗ ಅವನು ಮಹಾಲಿಂಗ ಸಂಬಂಧಿಯಾಗಿ ಐ
ಸ್ಥಲದಲ್ಲಿ ಇರುತ್ತಾನೆ. ಈ ಐಕ್ಯ ಸ್ಥಲದ ಧರ್ಮಾಚಾರಿಯಲ್ಲಿ ಭಕ್ತ ಮಹೇಶ
ಅಂಗಸ್ಥಲಗಳು ಮತ್ತು ಆಚಾರಲಿಂಗ ಗುರುಲಿಂಗಾದಿ ಲಿಂಗಸ್ಥಲಗಳು ಕೂ
ಒಂದಾಗುತ್ತವೆ. ಅವನ ಅಂಗವೇಲಿಂಗ, ಲಿಂಗವೇ ಅಂಗವಾಗುವುದರಿಂದ ಅವ
ಅಂಗವೆಲ್ಲ ಮಂತ್ರಮಯವಾಗುತ್ತದೆ.

"ಓಂ ಎಂಬಕ್ಷರವೇ ರಸ, ನ ಎಂಬಕ್ಷರವೆ ರುಧಿರ, ಮ ಎಂಬಕ್ಷರವೆ ಮಾಂಸ
ಶಿ ಎಂಬಕ್ಷರವೇ ಮೇದಸ್ಸು, ವಾ ಎಂಬಕ್ಷರವೇ ಅಸ್ಥಿ, ಯ ಎಂಬಕ್ಷರವೇ ಮಜ್ಜೆ
ಷಡಕ್ಷರದಿಂದ ಶುಕ್ಲ ಶೋಣಿತ (ಚ.ಬ.ವ. ೧೭೯)

ಹೀಗೆ ಸದ್ಗುರು ಕೃಪಾವಶೇಷದಿಂದ ಪಂಚಾಚಾರಗಳನ್ನು ಮತ್ತು ಈ ಆದ
ಕ್ರಿಯಾಚಾರಗಳನ್ನು ಅರಿತು ಅನುಭವಿಸಿದ ಅಂಗಸ್ಥಲ ಲಿಂಗಸ್ಥಲಗಳಾದ ಏಕೋತ್ತ
ಶತಸ್ಥಲವ ಮೀರಿ ಬಯಲೊಳಗೆ ಬಯಲಾಗಿ ನಿರ್ವಯಲ ಸಾಧಿಸುವುದೇ ಸರ್ವಾ
ಚಾರ ಸಂಪತ್ತಿನ ಆಚಾರದ ನಿಲುಗಡೆ. ಈ ಸರ್ವಾಚಾರ ಸಂಪತ್ತಿನಾಚರಣೆಯಲ್ಲಿ
ಸಾಧಕ ಸಿದ್ಧನಾಗುತ್ತಾನೆ. ಈ ಸಿದ್ಧನಲ್ಲಿ ಅಷ್ಟಾವರಣವೇ ಅಂಗ ಪಂಚಾಚಾರವೇ
ಪ್ರಾಣವಾಗುವುದರಿಂದ ಪಂಚಾಚಾರಗಳು ಸಪ್ತಾಚಾರದಲ್ಲಿ ಲೀನವಾಗಿ ತಮ್ಮ ಬಾಹ್ಯ
ಸ್ಥಿತಿಯನ್ನು ಕಳೆದುಕೊಳ್ಳುತ್ತವೆ. ಹೀಗೆ ಸತಿಯೂ ಸಾಧಕನು ಬಾಹ್ಯಾಚಾರಣೆ ಪ್ರಧಾ
ವಾದ ಪಂಚಾಚಾರಗಳನ್ನು ಅರಿತು ಆಚರಿಸುತ್ತಾ ಬಹಿರಂಗ ಶುದ್ಧಿಯಿಂದ ಸವ
ವಿಧವಾದ ಪೂರ್ವಾಶ್ರಮವಳಿದು ಅಂತರಂಗಾಚರಣೆಯಾದ ಸಪ್ತಾಚಾರವನ್ನು ತನ್ನಲ್ಲಿ
ಅಳವಡಿಸಿಕೊಂಡು ನಿರವಯ ನಿಲುಗಡೆಯನ್ನು ಹೊಂದುತ್ತಾನೆ.

ವೀರಶೈವರಿಗೆ ನಾಲ್ಕು ವರ್ಣಗಳಾಗಲಿ, ನಾಲ್ಕು ಆಶ್ರಮಗಳಾಗಲಿಇಲ್ಲ; ಶಿವ-
ದೀಕ್ಷೆಯಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದವರ ವರ್ಣಗಳಳಿದು
ಹೋಗುತ್ತವೆ. ಲಿಂಗವಂತರು ಅಪ್ರಾಕೃತರಾಗುತ್ತಾರೆ. ಅಲ್ಲದೆ, ಅಷ್ಟಾವರಣ,
ಪಂಚಾಚಾರ, ಷಟ್‌ಸ್ಥಲಾ ಚರಣೆಗಳಿಗೆ ಅರ್ಹರಾಗಿ ಮೋಕ್ಷಾಧಿಕಾರಿಗಳಾಗುತ್ತಾರೆ.
ಭಾರತದಲ್ಲಿನ ಜೈನ, ವೈದಿಕ ಮತಗಳಲ್ಲಿ ಸ್ತ್ರೀಯರಿಗೆ ಮೋಕ್ಷಾಧಿಕಾರವಿಲ್ಲ. ಆದರೆ
ವೀರಶೈವರಲ್ಲಿ ಸ್ತ್ರೀಪುರುಷರಿಬ್ಬರೂ ಮೋಕ್ಷಾಧಿಕಾರಿಗಳು ಈ ಉಭಯರಿಗೂ ಲಿಂಗಧಾರ
ಮತ್ತು ಶಿವದೀಕ್ಷೆಗಳುಂಟು. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳಲ್ಲಿ ತಾರತ-
ಮ್ಯಭಾವವಿಲ್ಲ. ವೀರಶೈವ ಧರ್ಮದಲ್ಲಿ ಪ್ರತಿಯೊಬ್ಬರೂ ಮೋಕ್ಷವನ್ನು ಪಡೆಯ-
ಬೇಕೆಂದು ಹೇಳಿದ್ದಾರೆ. ಆ ಮೋಕ್ಷವನ್ನು ಪಡೆಯಬೇಕೆಂಬ ಜೀವನು, ಮೊದಲು

ವದೀಕ್ಷೆಯಿಂದ ಪುನೀತನಾಗಬೇಕು. ಕ್ರಿಯಾಪ್ರಧಾನವಾದ ಅಷ್ಟಾವರಣ, ಜ್ಞಾನ-
ಧಾನವಾದ ಷಟ್‌ಸ್ಥಲನೀತಿ ಪ್ರಧಾನವಾದ ಪಂಚಾಚಾರಗಳಿಂದ ಕೂಡಿರಬೇಕು.
ೀರಶೈವ ಶಾಸ್ತ್ರಾನುಸಾರವಾಗಿ ಈ ಸಾಧನೋಪಾಯಗಳನ್ನು ಆಚರಿಸುವವನೇ ನಿಜ
ಾದ ವೀರಶೈವನೆನಿಸುವನು. ಹಾಗೂ ಪುನರ್ಜನ್ಮರಹಿತವಾದ ಆನಂದಮಯವಾದ
ೋಕ್ಷವನ್ನು ಪಡೆಯುವನು ಎಂದು ಹೇಳಲಾಗಿದೆ, ಮಹಡಿಯನ್ನು ಹತ್ತಲು ಮೆಟ್ಟ
ಂತಿನೆ ಈ ಸಾಧನೋಪಾಯಗಳು. ಇವುಗಳಲ್ಲಿ ಪಂಚಾಚಾರದಬಗ್ಗೆ ಸೂಕ್ಷ್ಮವಾಗಿ
ರಿಶೀಲಿಸೋಣ.

**ಲಿಂಗಾಚಾರ :-** ವೀರಶೈವರಿಗೆ ಇಷ್ಟಲಿಂಗವೇ ದೇವರು ಅನ್ಯದೇವರನ್ನು ಅವರು
ೂಜಿಸುವುದಿಲ್ಲವೆಂದು ವೀರಶೈವಧರ್ಮ ಗ್ರಂಥಗಳು ಪ್ರತಿಪಾದಿಸುತ್ತವೆ. ಸಮಾಜದ
ಲ್ಲಿರುವ ಪ್ರತಿಯೊಬ್ಬ ಮಾನವನೂ ತನಗೆ ಇಷ್ಟಬಂದಂತೆ ಒಂದೊಂದು ದೇವರನ್ನು
ೂಜಿಸುವುದೆಂತು ? ಅದು ಸಾಧ್ಯವಾಗದ ಮಾತು. “ ಏಕಂ ಸತ್ ವಿಪ್ರಾ ಬಹು.
ಾವದಂತಿ ” ಎಂಬ ವೇದವಾಕ್ಯದಂತೆ “ ದೇವರು ಒಬ್ಬನೇ ” ಆತನು ಲಿಂಗರೂಪನು.
ಅವನನ್ನು ಶಿವನೆಂದೂ ಶಕ್ತಿವಿಶಿಷ್ಟನೆಂದೂ ಕರೆದಿದ್ದಾರೆ. ಹೂ ಮತ್ತು ವಾಸನೆ,
ಾಕ್ ಮತ್ತು ಅರ್ಥ, ರತ್ನ ಮತ್ತು ಕಾಂತಿಗಳಂತೆ ಶಿವನು ಶಕ್ತಿ ವಿಶಿಷ್ಟನಾಗಿ
ಅದ್ವೈತರೂಪನಾಗಿದ್ದಾನೆ. ಶ್ರೀ ಬಸವೇಶ್ವರರು ಇಬ್ಬರು ಮೂವರು ದೇವರೆಂದು
ಬ್ಬುಬ್ಬಿ ಮಾತನಾಡಬೇಡ, ದೇವನೊಬ್ಬನೇ ಕಾಣಿರೋ ಇಬ್ಬರೆಂಬುದು ಪುಸಿ
ಕೂಡಲಸಂಗಮ ದೇವನೊಬ್ಬನಲ್ಲದಿಲ್ಲವೆಂದಿತ್ತುವೇದ. ದೇವನೊಬ್ಬ ನಾಮಹಲವು ”
ಎಂದು ಹೇಳಿದ್ದಾರೆ. ಹಿರಿಯರ ವಾಣಿಯನ್ನು ಅರಿತು ಪೂಜಿಸಿದರೆ ಸಮಾಜದಲ್ಲಿ
ಿನ್ನ ಭಾವನೆಗಳಿಗೆ ಆಸ್ಪದವೇಇರುವುದಿಲ್ಲ. ಎಲ್ಲರೂ ಐಕ್ಯದಿಂದ ಕೂಡಿ ಸಂತೊಷ-
ರಪಾದ ಜೀವನವನ್ನು ನಡೆಸಲು ಅವಕಾಶದೊರೆಯುತ್ತದೆ. ತಿವ್ರತೆಯಾದ ಸ್ತ್ರೀಯಳಿಗೆ
ಒಬ್ಬನೇ ಗಂಡನಿರುವಂತೆ ನಿಷ್ಠಾಪರನಾದ ಶಿವಭಕ್ತನಿಗೆ ಶಿವಲಿಂಗಒಂದೆ.

.ಶ್ರೀ ಗುರುವಿನಿಂದ ಲಿಂಗಧಾರಣ ಮಾಡಿಸಿ, ಕಾಯದ ಪೂರ್ವಾಶ್ರಯವನ್ನು
ಕಳೆಯುವುದು ವೀರಶೈವಾಚರಣೆಯ ಮೊಟ್ಟಮೊದಲ ಸಂಸ್ಕಾರ. ಅದು ಇಷ್ಟಲಿಂಗ.
ಧಾರಣ ರೂಪವಾಗಿದೆ. ತಾತ್ವಿಕ ದೃಷ್ಟಿಯಿಂದ ಈ ಇಷ್ಟಲಿಂಗ ಜೀವನದಲ್ಲಿ ಅಡಗಿ-
ಕೊಂಡಿರುವ ಚಿತ್ಕಳೆಯ ಸ್ವರೂಪವಾಗಿರುತ್ತದೆ. ಒಳಗೆ ಇರುವ ಈ ಲಿಂಗ ಕಳೆಯನ್ನು
ಹಸ್ತ ಮಸ್ತಕವನ್ನು ಮುಟ್ಟಿಆಶೀರ್ವದಿಸಿ ಗುರುಗಳು ಶಿಷ್ಯನ ಕರಸ್ಥಲಕ್ಕೆ ಕೊಡುವ
ಕುರುಹೇ ಈ ಇಷ್ಟಲಿಂಗ. ಈ ಇಷ್ಟಲಿಂಗದ ಮುಖಾಂತರ ಗುರುಗಳು ಶಿಷ್ಯನಿಗೆ
ಆತನ ಸ್ವರೂಪಜ್ಞಾನ ಮಾಡಿಕೊಡುವುದರಿಂದ ಶಿಷ್ಯನ ಸರ್ವೇಂದ್ರಿಯುಗಳೂಸಹ ಲಿಂಗ
ಸ್ವರೂಪವನ್ನು ಹೊಂದುತ್ತವೆ. ಆಗ ಅವನ ಘ್ರಾಣೇಂದ್ರಿಯದಲ್ಲಿ ಆಚಾರಲಿಂಗ,
ರಸನೇಂದ್ರಿಯದಲ್ಲಿ ಗುರುಲಿಂಗ, ನೇತ್ರೇಂದ್ರಿಯದಲ್ಲಿ ಶಿವಲಿಂಗ, ತ್ವಗಿಂದ್ರಿಯದಲ್ಲಿ
ಜಂಗಮಲಿಂಗ, ಶ್ರೋತ್ರೇಂದ್ರಿಯದಲ್ಲಿ ಪ್ರಸಾದಲಿಂಗ, ಹೃದಯದಲ್ಲಿ ಮಹಾಲಿಂಗವಳ-

ಪಡುತ್ತವೆ. ಸದ್ಗುರುವು ಈ ರೀತಿಯಾಗಿ ಸ್ಥೂಲಶರೀರಕ್ಕೂ ಇಷ್ಟಲಿಂಗ ಸಂಬಂಧ ವನ್ನುಂಟುಮಾಡಿ ಈ ಇಷ್ಟಲಿಂಗಕ್ಕೂ ಸೂಕ್ಷ್ಮಶರೀರದಲ್ಲಿರುವ ಪ್ರಾಣಲಿಂಗಕ್ಕೂ, ಕಾರಣ ಶರೀರದಲ್ಲಿರುವ ಭಾವಲಿಂಗಕ್ಕೂ ಇರುವ ಸಂಬಂಧವನ್ನು ಶಿಷ್ಯನಿಗೆ ತಿಳಿಯ ಪಡಿಸುತ್ತಾನೆ. ನಂತರ ಲಿಂಗಜಂಗಮ, ಜಂಗಮಲಿಂಗದ ಗೂಢಸಂಬಂಧವನ್ನು ಶಿಷ್ಯ ನಿಗೆ ತಿಳಿಸುತ್ತಾನೆ. ಜಂಗಮ ಅಂಗ-ಲಿಂಗ ಸಾಮರಸ್ಯವನ್ನು ತಿಳಿಸುವ ಸುಜ್ಞಾನ- ಮೂರ್ತಿ. ತಾತ್ವಿಕ ದೃಷ್ಟಿಯಿಂದ ಶಿವನೇ ಗುರು ಲಿಂಗ ಜಂಗಮ ಎಂಬ ಮೂರು ರೂಪ ಧರಿಸುತ್ತಾನೆ. 'ಏಕೋಃ ಮುರ್ತಿಸ್ತ್ರಯೋ ಭಾಗಾಃ ಗುರುರ್ಲಿಂಗಂತು ಜಂಗಮಃ' ಎಂದು ಶಿವಾಗಮೋಕ್ತಿಯಿಂದ ತಿಳಿದು ಬರುತ್ತದೆ.

ಗುರು ನಿರೂಪಿಸಿದ ತತ್ವ ತತ್ವವಾಗಿ ಉಳಿಯದೆ ಸಾಧಕನ ಜೀವನದ ಸತ್ವವಾಗ ಬೇಕು. ಆದುದರಿಂದ ಅಷ್ಟಾವರಣಗಳಾದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ, ತತ್ವಗಳನ್ನು ತನ್ನ ಜೀವನದಲ್ಲಿ ಮತ್ತು ಆಚರಣೆಯಲ್ಲಿ ಅಳವಡಿಸಿಕೊಳ್ಳಬೇಕು. ಇವೆಲ್ಲವನ್ನು ಅರಿತು ಲಿಂಗಪೂಜಾನಿಷ್ಠನಾಗಿ ಜೀವನವನ್ನು ನಡೆಸುವುದು ಸಾರ್ಥಕವಾಗುತ್ತದೆ. ಇಷ್ಟಲಿಂಗವನ್ನು ಗುರುಜಂಗಮರನ್ನು ಪೂಜಿಸಬೇಕು. ಅಂಗ ಗುಣ(ಸದ್ಗುಣ) ಗಳನ್ನು ಅಳವಡಿಸಿಕೊಳ್ಳಬೇಕು

೨ **ಸದಾಚಾರ** :- ಮಾನವ ಸಮಾಜಜೀವಿ. ಅವನು ಪ್ರತಿನಿತ್ಯ ತನ್ನ ಜೀವನದಲ್ಲಿ ಅನೇಕ ಎಡರು ತೊಡರುಗಳನ್ನು, ಕಷ್ಟನಷ್ಟಗನ್ನು ಅನುಭವಿಸಬೇಕಾಗುತ್ತದೆ. ಮತ್ತು ಅನೇಕ ಪಾಪಕರ್ಮಗಳಿಂದ ಅನ್ಯಾಯ-ಅಕ್ರಮಗಳಿಂದ ದೂರನಾಗಿರುವುದೇ ಸದಾಚಾರವೆನಿಸುತ್ತದೆ. ಸದಾಚಾರವೇ ಕಾಯಕ, ಕಾಯಕಕ್ಕೆ ಸದಾಚಾರ ಬೇಕಲ್ಲದೆ ಡಾಂಭಿಕ ವೃತ್ತಿಯಲ್ಲ ಭಕ್ತಿ-ಜ್ಞಾನ ವಿರಹಿತರಾಗಿ ತೋರಿಕೆಗೆ ಮಾಡುವುದೆಲ್ಲ ಕರ್ಮ ವೃತ್ತಿ ಸತ್ ಶೀಲವಲ್ಲ ಸದಾಚಾರವಲ್ಲ. "ಶೀಲವೆಂದೆಡೆ ಸದಾಚಾರ ಶೀಲವಿನ್ನಾವುದೆಂ ದೆಡೆ ಆಶನ ಅರಿತು ವ್ಯಸನನಿಂದು, ವ್ಯಾಪ್ತಿಯಳಿದು ಅಷ್ಟಮದವೆಲ್ಲ ನಷ್ಟವಾದಲ್ಲದೆ ಕೂಡಲ ಸಂಗಮ ದೇವರಲ್ಲಿ ಶೀಲವಿಲ್ಲ" (ಚ.ಬ.ವ ೫೮೯) ಆದರಿಂದ ಪಂಚೇಂದ್ರಿಯ ಸಪ್ತಧಾತು, ಅರಿಷಡ್ವರ್ಗ, ಅಷ್ಟಮದಂಗಳ ಕೊಂದಾತನೆ ಶೀಲವಂತ (ಚ.ಬ.ವ ೧೧೧೩) ಕಾಮಕ್ರೋದಾಧಿಗಳನ್ನು ಜಯಿಸದೆ, ಅಷ್ಟವಿಧಾರ್ಚನೆ, ಷೋಡಶೋಪಚಾರ ಮಾಡು ವುದು ಸತ್ಯ ಶೀಲವಾಗಲಾರದು.

ಅಷ್ಟವಿಧಾರ್ಚನೆ ಷೋಡಶೋಪಚಾರಗಳನ್ನು ವೀರಶೈವವು ತ್ಯಜಿಸಿದೆಯೆಂದ ರ್ಥವಲ್ಲ. ಅದು ಬೇಕು ನಾನು ನೀನೆಂಬ ಭ್ರಾಂತುಳ್ಳನ್ನಕ್ಕೆ ಅಷ್ಟವಿಧಾರ್ಚನೆ, ಷೋಡಶೋ ಪಚಾರವ ಮಾಡಬೇಕು. ಕೂಡಲ ಚನ್ನಸಂಗಯ್ಯ ಇವ ಮಾಡದಿದ್ದರೆ ನಾಯಕ ನರಕ ಎಂದು ಚನ್ನಬಸವಣ್ಣನವರು ಅಭಿಪ್ರಾಯ ಪಟ್ಟಿರುತ್ತಾರೆ. ಆದರೆ ಈ ಅರ್ಚನೆ ಉಪಚಾರಗಳು ಸುಜ್ಞಾನಸದ್ಭಕ್ತಿ ಯುಕ್ತವಾಗಿರುತ್ತವೆ. ಆದುದರಿಂದ ಅದು ಸದಾ ಚಾರವೆನ್ನಿಸಿಕೊಳ್ಳುತ್ತದೆ.

ಪ್ರತಿಯೊಂದು ಧರ್ಮದವರೂ, ಪರದ್ರವ್ಯವನ್ನು ಬಯಸುವುದು, ಪರರ ವಸ್ತು
ನ್ನು ಬಯಸುವುದು, ಪರಸ್ತ್ರೀಯರನ್ನು ಬಯಸುವುದು, ಪಾಪಕಾರ್ಯವನ್ನು ಮಾಡು
ದು, ಅನ್ಯಾಯ, ಅಕ್ರಮ, ಇಂತಹ ಕೆಟ್ಟಗುಣಗಳನ್ನು ದೂರೀಕರಿಸುತ್ತಾರೆ. ಎಲ್ಲ
ರ್ಮದವರೂ ಅಪೇಕ್ಷಿಸುವುದು ಒಳ್ಳೆಯ ಸದಾಚಾರ, ಸಧರ್ಮನಡವಳಿಕೆಯನ್ನು.
ಮಾಜದಲ್ಲಿ ಹೀನ ಕೃತ್ಯಗಳು ಪ್ರತಿನಿತ್ಯ ನಡೆಯುತ್ತಲೇ ಇರುತ್ತವೆ. ಇಂತಹ ಹೀನ
ತ್ಯಗಳಿಗೆ ಸಮಾಜದ ಜನ ಜಾಗ್ರತೆಯಾಗಿ ತಲೆ ಬಾಗುವಂತೆ ಒಳ್ಳೆಯ ಕಾರ್ಯಗಳಿಗೆ
ಣಗಳಿಗೆ ತಲೆಬಾಗಲಾರರು. ಈ ರೀತಿ ಇರುವ ಸಮಾಜದಲ್ಲಿ ಮಾನವ ಶಾಂತಿ
ಂದ ಸುರಕ್ಷತೆಗಳಿಂದ ಜೀವನ ನಡೆಸುವುದು ತುಂಬಾ ದುಸ್ತರವೆನಿಸುತ್ತದೆ. ಪಾಶ
ಮತ್ತು ರಾಕ್ಷಸೀ ವೃತ್ತಿಗಳಿಗೆ ಹೆಚ್ಚು ಬಲವುಂಟಾಗುವುದು. ಆದ್ದರಿಂದ ಸಮಾಜ
ಇಂಥ ಕಾರ್ಯಗಳು ದೂರವಾಗಬೇಕು ಎಂದು ಅನೇಕ ಶಾಸ್ತ್ರಗಳು ಮಾನವ
ತಿಳುವಳಿಕೆಯನ್ನುಂಟು ಮಾಡುತ್ತಲೇ ಇವೆ ಅವುಗಳನ್ನು ಅರಿತು ಪರದ್ರವ್ಯ
ಸ್ತ್ರೀ ಪರವಸ್ತುಗಳನ್ನು ಬಯಸದೇ ಕಾಯಕ ನಿರತನಾಗಿ ಸದ್ಗುಣಗಳಿಂದ ಕೂಡಿ
ಗನಿಷ್ಠೆಯಿಂದಿರುವುದಲ್ಲದೆ, ಗುರು ಲಿಂಗ, ಜಂಗಮ ಸೇವೆಗೋಸ್ಕರವಾಗಿ ಸತ್ಯ ಶುದ್ಧ
ಯಕವನ್ನು ಮಾಡಿದರೆ ಸಮಾಜದ ಹಾಗೂ ದೇಶದ ಸಂಪದಭಿವೃದ್ಧಿಗೆ ಕಾರಣ
ಸುತ್ತವೆ. ಸಂಪತ್ತು ಸಮಾಜಕ್ಕೆ ಪ್ರಾಣಸ್ವರೂಪವೆನಿಸುತ್ತದೆ. ತನಗೂ ಮತ್ತು
ಸಮಾಜಕ್ಕೂ ರಾಷ್ಟ್ರಕ್ಕೂ ಹಿತಕರವೆನಿಸುವುದು.

**ಾಚಾರ,** – ಶ್ರೀ ವೀರಶೈವ ಧರ್ಮದಲ್ಲಿ ಜಾತಿಭೇದದ ಮಾತಿಲ್ಲ. ಎಲ್ಲರೂ ಒಂದೇ
ಬ ಸಮಾನತೆಯ ಭಾವನೆ ಅವರಲ್ಲಿ ಮೂಡಿರುತ್ತದೆ. ಹಾಗೆ ಅರಿತು ನಡೆಯುವುದೇ
ಚಾರ ವೆನಿಸುತ್ತದೆ.

ಮನುಷ್ಯರಲ್ಲಿ ಹೊಲೆ ಹದಿನೆಂಟು ಜಾತಿಕುಲಗಳೆಂಬುದಿಲ್ಲ ಲಿಂಗಧಾರಿಗಳಾದ
ರಲ್ಲಿಯಂತೂ ಉಚ್ಚ-ನೀಚ ಕುಲಗಳೆಂಬ ಭೇದವನ್ನು ಎಣಿಸಬಾರದು.
ಲೆಯಲ್ಲಿಹುಟ್ಟಿ ಕುಲವನರಸುವರೇ? ಕರ್ಣದಲ್ಲಿ ಜನಿಸಿದವರುಂಟೆ? ಎಂಬುದು
ನಕಾರರ ಸ್ಪಷ್ಟ ಅಭಿಪ್ರಾಯವಾಗಿದೆ. ಹೊಲೆಯರಾರೆಂಬುದರ ಬಗ್ಗೆ ಅಂಬಿಗರ
ಡಯ್ಯನು ಬಹುಸ್ವಾರಸ್ಯ ಪೂರ್ಣವಾಗಿ ಹೇಳಿದ್ದಾನೆ. "ಹೊಲೆಯ
ಲೆಯ ಎಂದೊಡೆ ಹೊಲೆಯರೆಂತಪ್ಪರಯ್ಯ? ತಂದೆ ತಾಯಿಗಳಿಗೆ ಬೈದವನೇ
ಲೆಯ ಎಂದು ಮುಂತಾಗಿ ಹೇಳಿದ್ದಾನೆ. ಪುರಂದರದಾಸರು ಹೊಲೆಯರಾರೆಂಬು
ಬಗ್ಗೆ ಹೀಗೆ ಹೇಳುತ್ತಾರೆ. ಇದ್ದ ಧನ ದಾನ ಧರ್ಮವ ಮಾಡದವ ಹೊಲೆಯ;
ತನ್ನೊಡಲ ಹೊರೆವಾತನೇ ಹೊಲೆಯ; ಬದ್ಧವಹ ನಡೆ–ನುಡಿಗಳಿಲ್ಲದಿದ್ದವ
ಲೆಯ; ಮದ್ದಿಕ್ಕಿ ಕೊಲುವವ ಮಾರಿ ಹೊಲೆಯ, ಕೊಂಡ ಋಣವನ್ನು ತಿರುಗಿ
ಡದಿದ್ದವನೆ ಹೊಲೆಯ. ಭಂಡ ಮಾತುಗಳಾಡುವವನೆ ಹೊಲೆಯ, ಗಂಡ ಹೆಂಡಿರ
ವೆ ಭೇದ ಗೈವವ ಹೊಲೆಯ, ಹೆಂಡಿರಿಚ್ಛೆಗೆ ನಡೆವ ಹೇಡಿ ಹೊಲೆಯ, ಎಂಬು
ಹೇಳಿದ್ದಾರೆ.

ಶಿವನೇ ಪಿತೃಸ್ಥಾನದಲ್ಲಿಯೂ, ಪಾರ್ವತಿಯೇ ಮಾತೃಸ್ಥಾನದಲ್ಲಿಯೂ, ಶಿ
ಭಕ್ತನೇ ಬಂಧುಗಳಾಗಿಯೂ, ಶಿವಮತವೇ ಶ್ರೇಷ್ಠಮತವೆಂದು ಸಾರಿಪುತ್ತಾ
ಹೀಗಿರುವಾಗ ಪ್ರತಿಯೊಬ್ಬ ಮಾನವನಿಗೂ ಒಂದೊಂದು ಜಾತಿ ಎಂಬ ಹೆಸರಿಟ್ಟ
ಸಮಾಜದಲ್ಲಿ ಗೊಂದಲವುಂಟಾಗಿ ಜನರು ಜಾತಿ-ಮತ-ಪಂಥವೆಂದು ಹೊಡೆದಾ
ಕಚ್ಚಾಡಿ ತಮ್ಮ ಜೀವನವನ್ನು ವ್ಯರ್ಥವಾಗಿ ಹಾಳುಮಾಡಿ ಕೊಳ್ಳುತ್ತಾರೆ. ಆಗ ಸಮಾ
ಜದಲ್ಲಿ ಐಕ್ಯತೆಮೂಡುವುದು ಹೇಗೆ? ಪರಸ್ಪರ ಪ್ರೀತಿ, ಪ್ರೇಮ ಬೆಳೆಯುವುದೆಂತು
ಸಮಾಜದಲ್ಲಿ ಒಳಪಂಗಡಗಳು ಬೆಳೆಯುತ್ತಾ ಹೋದಂತೆಲ್ಲ ಅದರಲ್ಲಿ ಒಡಕು ಅಧಿಕ
ವಾಗುತ್ತಾ ಹೋಗುತ್ತದೆ. ಇದನ್ನು ಸರಿಪಡಿಸಲು ಜನ ಶಿವಾಚಾರದ ತತ್ವಗಳನ್ನು
ತಿಳಿದು ನಡತೆಯಲ್ಲಿ ಆಚರಿಸಬೇಕು. ಆಗ ಸಮಾಜದಗೌರವ ದೃಢತೆ ಹೆಚ್ಚುತ್ತದೆ.

ಈ ಶಿವಾಚಾರದ ತಿರುಳನ್ನು ಶಿವಶರಣರಲ್ಲಿ ಶ್ರೇಷ್ಠರೆನಿಸಿರುವ ಬಸವಣ್ಣನವ
೧೨ನೇ ಶತಮಾನದಲ್ಲಿಯೇ ಆಚರಿಸಿ ನಡೆ–ನುಡಿಗಳಲ್ಲಿ ಒಂದಾಗಿ ಸಮಾಜದ ಗೌ
ವವನ್ನು ಹೆಚ್ಚಿಸಿದ್ದಾರೆ. ತಾರತಮ್ಯವನ್ನೆಣಿಸದೆ ಶಿವಶರಣರೆಲ್ಲರೂ ಒಂದೇ ಎಂ
ಭಾವಿಸಿ ಶಿವಧರ್ಮ ತತ್ವಗಳಂತೆ ನಡೆಯಬೇಕಾಗುತ್ತದೆ. ಪಂಚಾಚಾರಗಳಲ್ಲಿ ಶಿವಾ
ಚಾರವೆಂಬ ಆಚಾರವೂ ಮತ್ತು ಅಷ್ಟಾವರಣಗಳಲ್ಲಿ ಗುರು-ಲಿಂಗ-ಜಂಗಮವೂ ಸಮ
ಶ್ರೇಷ್ಠವೆಂದು ಹೇಳಿರುತ್ತಾರೆ.

**ಭೃತ್ಯಾಚಾರ–** ಶಿವಭಕ್ತರೆಲ್ಲರೂ ಒಂದೇ ಎಂದುತಿಳಿದು ಅವರ ಬಗ್ಗೆ ಪೂಜ್ಯತೆಯಿಂ
ನಡೆದು ಅವರೇಪೂಜ್ಯರೆಂದು ತಿಳಿದು ಅವರಲ್ಲಿ ಮೇಲು ಕೀಳೆಂಬ ಭೇದಭಾವವನ್ನು
ಎಣಿಸದೆ ಕಿಂಕುರ್ವಾಣಭಾವದಿಂದ ನಡೆದುಕೊಳ್ಳಬೇಕು. ಸಮಾಜದಲ್ಲಿ ಮಾನ
ಸದಾಶಿವ ಶರಣರ ಸೇವೆಮಾಡಲು ಸಿದ್ಧನಾಗಬೇಕಾಗುತ್ತದೆ. “ಎನಗಿಂತ ಕಿರಿಯರಿ
ಶಿವಭಕ್ತರಿಗಿಂತ ಹಿರಿಯರಿಲ್ಲ” ಎಂದು ಬಸವಣ್ಣನವರು ಹೇಳಿರುತ್ತಾರೆ. ಇದನ್ನು
ಅರಿತು ಆಚರಿಸುವುದೇ ಭೃತ್ಯಾಚಾರವೆನಿಸುವುದು. ಮಾನವ ತಾನು ಎಲ್ಲರಿಗಿಂತಲೂ
ಹೆಚ್ಚಿನವನೆಂಬ ಹೆಮ್ಮೆಪಡಬಾರದು. ಮಹನೀಯನಾದವರು ಆರೀತಿ ಹೇಳಿಕೊಳ್ಳುವು
ದಿಲ್ಲ. ಎಲ್ಲರಿಗಿಂತಲೂ ತಾವು ಕಡಿಮೆ ಎಂದೇ ಹೇಳಿಕೊಳ್ಳುತ್ತಾರೆ. ಅಂತಹ ಹೆಸರು
ಎಂದೆಂದೂ ಪ್ರಕಾಶಮಾನವಾಗಿ ಬೆಳಗುತ್ತಿರುತ್ತದೆ. (ಸಮಾಜದ ಕಷ್ಟನಷ್ಟಗಳನ್ನು
ಸಹಿಸಿಕೊಂಡು, ಸುಖ ಸಂತೋಷಗಳನ್ನು ಬದಿಗೊತ್ತಿ ಮಾನಾಪಮಾನಗಳನ್ನು ಸಹಿ
ಸಿಕೊಂಡು, ದಾಸಾನುದಾಸರಾಗಿ ಹಗಲಿರುಳು ಸಮಾಜಸೇವೆಯಲ್ಲಿ ನಿರತರಾಗಿ ಸಮಾ
ಜದ ಏಳಿಗೆಗಾಗಿ ದುಡಿಯುತ್ತಿರುವ ವಿಭೂತಿ ಪುರುಷರುಗಳೇ ನಿಜವಾದ ಭೃತ್ಯಚಾ
ವುಳ್ಳವರೆನಿಸಿ ಕೊಳ್ಳುತ್ತಾರೆ.) ಇವರು ಸಮಾಜದ ಸೇವಕರಾಗಿ ಸಮಾಜದ ಸೇವೆಯ
ನಿರತರಾಗಿರುತ್ತಾರೆ. ಒಬ್ಬ ವ್ಯಕ್ತಿ ಸಮಾಜದಲ್ಲಿ ಮಾನ್ಯತೆಯನ್ನು ಪಡೆಯಬೇಕಾದ

ವನು ಐಶ್ವರ್ಯವಂತನೆಂದಲ್ಲ, ಅವನು ಅನೇಕರಿಂದ ಅನ್ಯಾಯವಾಗಿ ಹಣಸಂಪಾ-
ಸುತ್ತಿದ್ದಾನೆಂದಲ್ಲ, ಅಥವಾ ತನ್ನಲ್ಲಿರುವ ಹಣವನ್ನು ದುಂದುವೆಚ್ಚ ಮಾಡುತಿದ್ದಾ-
ನೆಂದಲ್ಲ, ಯಾವನು ತನ್ನ ಸಮಾಜಸೇವೆಯನ್ನು ನಿಷ್ಠೆಯಿಂದ, ಪರಿಶುದ್ಧಾಂತಃಕರ-
ದಿಂದ, ಅವಿಶ್ರಾಂತಪರಿಶ್ರಮದಿಂದ, ಯಾವಪ್ರತಿಫಲಾಪೇಕ್ಷೆಯೂ ಇಲ್ಲದೆ ಕಾರ್ಯ
ರ್ವಹಿಸುತ್ತಾನೋ ಅವನೇ ನಿಜವಾದ ಯೋಗ್ಯತೆ ಇರುವ ಮಾನವನೆಂದು ಹೇಳ-
ಹುದು. ಅವನೇ ಸಮಾಜದಲ್ಲಿ ಸರ್ವಶ್ರೇಷ್ಠನು. ಭೃತ್ಯಚಾರಿಯೂ ಆಗಿರುತ್ತಾನೆ.
ಸಮಾಜದಲ್ಲಿ ಮಾನ್ಯತೆಯನ್ನು ಪಡೆಯುತ್ತಾನೆ. ಅವನ ಕೀರ್ತಿಯು ಅಜರಾಮರ-
ವಾಗಿ ಉಳಿಯುತ್ತಾಬಂದು ಲೋಕಪೂಜ್ಯನಾಗುತ್ತಾನೆ.

**ಗಣಾಚಾರ :-** ಗಣಾಚಾರವೆಂದರೆ ಶಿವಧರ್ಮ, ಶಿವತತ್ವಗಳ ರಕ್ಷಣೆಗೆ ಕಂಕಣ-
ಕಟ್ಟುವುದು, ಶಿವನಬಗ್ಗೆ ನಿಂದನೆಗಳು ಕೇಳಿಬಂದರೆ, ದೂಷಣೆಗಳು ಬಂದರೆ, ಕಿವಿ-
ಗೊಟ್ಟು ಕೇಳಬಾರದು, ಆದಷ್ಟು ಅಂತಹ ನಿಂದನೆಗಳನ್ನು ತಡೆಗಟ್ಟಬೇಕು. ಮತ್ತು
ಅವುಗಳನ್ನು ತಪ್ಪಿಸಲು ಸರ್ವಪ್ರಯತ್ನವನ್ನು ಮಾಡಬೇಕಾಗುತ್ತದೆ. ಪ್ರಾಣವಿರುವ-
ವರೆವಿಗೂ ಲಿಂಗನಿಷ್ಠೆಯಿಂದಿರುವೆನೆಂಬ ಛಲಬೇಕು, ಬಸವಣ್ಣನವರು ಹೇಳಿರುವಂತೆ

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ
ಛಲಬೇಕು ಶರಣಂಗೆ ಪರದೈವನೊಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗ ಜಂಗಮ ಒಂದೇ ಎಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ
ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವ.

ಸಮಾಜವು ಮುಂದುವರಿಯಬೇಕಾದರೆ ಆ ಸಮಾಜದಲ್ಲಿ ವಾಸಮಾಡುವ ಜನ
ಮೆತ್ತಗಿದ್ದರೆ ಸಾಲದು, ದಕ್ಷರಾದ, ಬುದ್ಧಿವಂತರಾದ, ನಿಷ್ಠಾವಂತರಾದ, ಜನ ಸಮಾಜದ
ಏಳಿಗೆಗಾಗಿ, ಭದ್ರತೆಗಾಗಿ, ಉನ್ನತಿಗಾಗಿ, ಉತ್ತಮ ಸಮಾಜದ ನಿರ್ಮಾಣಕ್ಕಾಗಿ
ದುಡಿಯಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ದುರ್ಬಲರನ್ನು ಸದೆಬಡಿಯಲು
ಕೆಲವರು ಮೇಲೆ ಬಂದು ತಮ್ಮ ಔನತ್ಯವನ್ನು ಸಾಧಿಸಿಕೊಳ್ಳುತ್ತಾರೆ. ದುರ್ಬಲರನ್ನು
ರಕ್ಷಣೆ ಮಾಡುವುದೇ ಕಡಿಮೆಯಾಗಿದೆ. ಸೌಮ್ಯ ಸಮಾಜವು ಇದ್ದರೆ, ದುಷ್ಟರು, ನೀಚರು,
ಪುಂಡರು, ಅದರ ದುರುಪಯೋಗ ಮಾಡಿಕೊಳ್ಳುತ್ತಾರೆ. ಇಂತಹ ಸಮಾಜ ಅಪ-
ಹಾಸ್ಯಕ್ಕೂ, ನಿಂದನೆಗಳಿಗೂ, ಗುರಿಯಾಗುವುದರಲ್ಲಿ ಸಂಶಯವೇ ಇಲ್ಲ. ಅಂತಹ
ಸಂದರ್ಭದಲ್ಲಿ ಉತ್ತಮ ಗುಣವುಳ್ಳ ವ್ಯಕ್ತಿಗಳು ಮುಂದೆ ಬಂದು ದುಷ್ಟ ನಿಗ್ರಹ ಮತ್ತು
ಶಿಷ್ಟಪರಿಪಾಲನೆಯ ಕಾರ್ಯದಲ್ಲಿ ತೊಡಗಬೇಕಾಗುತ್ತದೆ. ಅದೇ ಗಣಾಚಾರ ತತ್ವ
ವೆನಿಸುತ್ತದೆ.

ಹೀಗೆ ಪಂಚಾಚಾರಗಳು ಮಾನವನಿಗೆ ಷಟ್‌ಸ್ಥಲೋಪಾಸನೆಗೆ ತುಂಬಾ ಸಹಾಯಕಗಳಾಗಿವೆ. ವೀರಶೈವ ಧರ್ಮದಲ್ಲಿ ಪಂಚಾಚಾರಗಳು ವ್ಯಕ್ತಿ ಮಾತ್ರವಲ್ಲದೆ ಸಮಾಜ ಮತ್ತು ದೇಶಕ್ಕೆ ಕೂಡ ಅನ್ವಯಿಸುತ್ತವೆ. ಇವುಗಳ ಆಚರಣೆಯಿಂದ ಮಾನವನ ಅಹಂಕಾರ ಅಭಿಮಾನಗಳೂ, ರಾಗದ್ವೇಷಗಳೂ, ಕಾಮಕ್ರೋಧಗಳೂ ತೊಲಗಿ ಅವನಲ್ಲಿ ಸಮದೃಷ್ಟಿ ಮತ್ತು ದಾಸಭಾವನೆ, ನಿರಹಂಕಾರತೆಗಳು ಸಹಜವಾಗಿ ವ್ಯಾಪಿಸುತ್ತವೆ. ಇದರಿಂದ ಮಾನವ ಸಮಾಜದಲ್ಲಿ ಉತ್ತಮವಾದ ಜೀವನವನ್ನು ನಡೆಸಲು ಸಾಧ್ಯವಾಗುತ್ತದೆ. ಈ ಗುಣಗಳಿಂದ ಸಮಾಜವು ಬಲಪಡುತ್ತದೆ. ಮತ್ತು ದೇಶವು ಉನ್ನತ ಸ್ಥಿತಿಯನ್ನು ಹೊಂದುವುದರಲ್ಲಿ ಸಂದೇಹವೇ ಇಲ್ಲ. ಆದ್ದರಿಂದ ಪ್ರತಿಯೊಬ್ಬರೂ ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರ ತತ್ವಗಳನ್ನು ಅರಿತು ಆ ಮಾರ್ಗದಲ್ಲಿ ನಡೆದು ಉತ್ತಮ ಜೀವನವನ್ನು ನಡೆಸಿದಾಗಲೇ ಬಾಳು ಸಾರ್ಥಕವೆನಿಸುವುದು, ಜೀವನ ಮುಕ್ತವಾಗುತ್ತದೆ. ದೇಶಕ್ಕೆ ಶಾಂತಿ, ಸಮಾಧಾನ ಲಭಿಸುತ್ತದೆ.

—**ಎನ್. ಸಿದ್ಧಲಿಂಗಯ್ಯ,** ಅಧ್ಯಾಪಕರು, ಗ್ರಾ. ಪ್ರೌಢಶಾಲೆ,
ಶ್ರೀ ಅಂಕನಹಳ್ಳಿಮಠ, ಕುಣಿಗಲ್ ತಾ||, ತುಮಕೂರು ಜಿಲ್ಲೆ.

## ವಚನಗಳು

ಮಾತನಾಡಿದಿರೆ ಮೂಕನೆಂದು ಕರೆವರು
ನುಡಿಸ ಹೋದರೆ ವಾಚಾಳಿಯೆಂದು ಜರೆವರು
ಅತ್ತರೆ ಅಂಜುಬುರುಕನೆಂಬರು
ನಕ್ಕರೆ ಜಂಭದಕೋಳಿಯೆಂಬರು
ಎಲುಬಿಲ್ಲದ ನಾಲಗೆಯ ವಕ್ರಬುದ್ಧಿಯ ಜನಕೆ
ಕಸವೂತಪ್ಪು ರಸವೂತಪ್ಪು, ನಂದಿಕೇಶ್ವರ.

ಹಾಲು ಬಿಳಿಯೆಂದು ಬಿಳಿಯಾದುದೆಲ್ಲ ಹಾಲಾಗದು
ಚಿನ್ನ ಹೊಳೆವುದೆಂದು ಹೊಳೆದುದೆಲ್ಲ ಚಿನ್ನವಾಗದು
ಸಜ್ಜನರಲ್ಲಿ ವಿನಯವುಂಟೆಂದು
ವಿನಯ ತೋರುವರೆಲ್ಲ ಸಜ್ಜನರಾಗರು ನಂದಿಕೇಶ್ವರ.

ಕಬ್ಬನಲ್ಲದೆ ಬಿದಿರ ನೆಟ್ಟರೆ ಬೆಲ್ಲವಹುದೇ ?
ಪೈರನಲ್ಲದೆ ಕಳೆಯ ನೆಟ್ಟರೆ ಭತ್ತವಹುದೇ ?
ಬಳ್ಳಿಯಲ್ಲದೆ ಕಳ್ಳಿ ನೆಟ್ಟರೆ ತೋಟವಹುದೇ ?
ವಿಷದ ಮರ ಬೆಳಸಿ ಅನೃತಫಲವ
ಕೊಯ್ದವರುಂಟೇ ನಂದಿಕೇಶ್ವರ ?

–**ವಿ.ಬಿ. ಅರ್ತಿಕಜೆ,** ಶ್ರೀ ನಿಲಯ, ಶಿವಪೇಟೆ, ಪುತ್ತೂರು ದ.ಕ-೫೭೪ ೨೦೧

## ಗಮಕಿ ವಿದ್ವಾಂಸ ಎಲ್. ಸಿದ್ಧಗಂಗದೇವರಿಗೆ ಶ್ರದ್ಧಾಂಜಲಿ

ತುಮಕೂರು ಜಿಲ್ಲೆ ಪ್ರಸಿದ್ಧ ಗಮಕಿಗಳೂ, ಕನ್ನಡ ಸಂಸ್ಕೃತ ವಿದ್ವಾಂಸರೂ, ಜಿಲ್ಲಾ ಗಮಕ ಪರಿಷತ್ತಿನ ಅಧ್ಯಕ್ಷರೂ ಆಗಿದ್ದ ರಾಷ್ಟ್ರಪ್ರಶಸ್ತಿ ವಿಜೇತ ಎಲ್. ಸಿದ್ಧಗಂಗದೇವರು 31-5-1995 ಶಿವೈಕ್ಯರಾದರು.

ತುಮಕೂರು ತಾ|| ಅರೆಯೂರಿನಲ್ಲಿ ಲಿಂಗಣ್ಣ ಮತ್ತು ಶ್ರೀಮತಿ ರುದ್ರಮ್ಮ ದಂಪತಿಗಳ ಪುತ್ರರಾಗಿ 1922ರಲ್ಲಿ ಜನಿಸಿದ ಇವರು 1952ರಲ್ಲಿ ಸಂಸ್ಕೃತ ಅಲಂಕಾರ ಶಾಸ್ತ್ರ, ವಿದ್ವತ್ ಉತ್ತಮ ಪರೀಕ್ಷೆಗಳಲ್ಲಿ ಉತೀರ್ಣರಾದರು. ವೇದಾಧ್ಯಯನ, ವ್ಯಾಕರಣ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಪಾಂಡಿತ್ಯ ಹೊಂದಿದ್ದರು. 1962ರಲ್ಲಿ ತಿರುಪತಿ ಕೇಂದ್ರದ ವಿದ್ಯಾ ಶಿಕ್ಷಾಶಾಸ್ತ್ರ ಪದವಿಯನ್ನು ಪಡೆದರು.

ಗಮಕ ಕಲೆಯ ಸೊಗಡು ಜಿಲ್ಲೆಯಾದ್ಯಂತ ಪಸರಿಸಲು ಶ್ರಮಿಸಿದರು. ಇದರಿಂದಾಗಿ ತುಮಕೂರಿನಲ್ಲಿ ಗಮಕ ಕಲೆ ಬೇರೂರಲು ಕಾರಣವಾಯಿತು. 1964ರಲ್ಲಿ ಕರ್ನಾಟಕ ಸರ್ಕಾರ ಇವರ ವೇದ ವಿದ್ವತ್ತಿಗೆ ಸಂಬಂಧಿಸಿದಂತೆ ರಾಜ್ಯ ಪ್ರಶಸ್ತಿ ನೀಡಿ ಗೌರವಿಸಿತು. ಬೆಂಗಳೂರಿನ ಗಮಕ ಕಲಾ ಪರಿಷತ್, ತುಮಕೂರಿನ ಶಂಕರ ಜಯಂತಿ ಸಭಾ, ಅಕ್ಕಮಹಾದೇವಿ ಸಂಘ, ಬಸವ ಜಯಂತಿ ಸಂಘ ಮತ್ತು ವೀರಶೈವ ಸಮಾಜ ಇವರ ಪ್ರತಿಭೆ ಮತ್ತು ಕಲೆಗಳಿಗೆ ಮೆಚ್ಚಿ ಸನ್ಮಾನ ನೀಡಿವೆ.

**ತ್ಯಾಗ ಮೂರ್ತಿ ಸತ್ಪುರುಷ :–** ಇವರ ಸಂಪರ್ಕ ಶ್ರೀ ಸಿದ್ಧಗಂಗಾ ಮಠಕ್ಕೆ ಬಾಲ್ಯದಿಂದಲೂ ಇತ್ತು. ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವೈವಿಧ್ಯಮಯ ಸಮಾಜ ಸೇವಾ ಕೈಂಕರ್ಯದಿಂದ ಸ್ಫೂರ್ತಿ ಪಡೆದು ಪ್ರಭಾನ್ವಿತರಾಗಿದ್ದರು. ಇದರ ಸತ್ಫಲವಾಗಿ ತಮ್ಮ ತನು, ಮನ, ಧನಗಳನ್ನು ಸಂಪೂರ್ಣವಾಗಿ 20ಲಕ್ಷ ರೂ. ಗಳ ಮೌಲ್ಯದ ಸ್ಥಿರ ಆಸ್ತಿಯನ್ನು ತುಮಕೂರು ತಾ|| ಮಾಕನಹಳ್ಳಿಯಲ್ಲಿ ನೂತನವಾಗಿ ಸ್ಥಾಪಿತವಾಗಿರುವ ಸಿದ್ಧಗಂಗಾ ಶಾಖಾ ಜಂಗಮ ಮಠದ ಅಭಿವೃದ್ಧಿಗಾಗಿ ಸಮರ್ಪಿಸಿದ್ದಾರೆ. ಈ ಶಾಖಾ ಮಠದ ಉದ್ಘಾಟನೆ ವಿಜೃಂಭಣೆಯಿಂದ 21 ಮೇ 1995ರಂದು ನೆರವೇರಿದುದನ್ನು ಸ್ಮರಿಸಬಹುದಾಗಿದೆ. ಈ ಸಂದರ್ಭದಲ್ಲಿ ಸತ್ಪಾತ್ರಕ್ಕೆ ಸಲ್ಲಿಸಿದ ದಾನಿಗಳಾದ ಎಲ್. ಸಿದ್ಧಗಂಗದೇವರು ಮತ್ತು ಅವರ ಧರ್ಮಪತ್ನಿ ಶ್ರೀಮತಿ ಪಾರ್ವತಮ್ಮ ಅವರನ್ನು

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆಶೀರ್ವದಿಸಿ ಗೌರವಿಸಿದರು. ಇವ
ಆಕಸ್ಮಿಕ ನಿಧನದಿಂದ ಮಠದ ಶ್ರಯೋಭಿವೃದ್ಧಿಗೆ ಅಪಾರ ಕುಂಠಿತವಾಗಿದೆ ಎಂದು
ಮಾಕನಹಳ್ಳಿ ಶ್ರೀ ಸಿದ್ಧಗಂಗಾ ಜಂಗಮ ಮಠದ ಶ್ರೀ ಶ್ರೀ ಗಳವರಾದ ಗಂಗಾಧ
ಸ್ವಾಮಿಗಳು ತಮ್ಮ ಶೋಕವನ್ನು ವ್ಯಕ್ತ ಪಡಿಸಿದ್ದಾರೆ.

ಸರಳತೆ ಮತ್ತು ಸಜ್ಜನಿಕೆಗೆ ಶ್ರೀಯುತರು ಪ್ರತೀಕವಾಗಿದ್ದರು. ಇವರ ನಿಧನದಿಂ
ವೀರಶೈವ ಸಮಾಜ ಮತ್ತು ಗಮಕ ಲೋಕಕ್ಕೆ ಅಪಾರ ನಷ್ಟವಾಗಿದೆ. ಮೃತರ ಆತ್ಮಕ್ಕೆ
ಶಾಂತಿ ಹಾಗೂ ಅವರ ಕುಟುಂಬಕ್ಕೆ ದುಃಖ ಸಹಿಸುವ ಶಕ್ತಿಯನ್ನು ಬಸವಾ
ಪ್ರಮಥರು ನೀಡಲಿ ಎಂದು "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.

## ಜಿಲ್ಲಾ ವಾರ್ತಾಧಿಕಾರಿ ಕೆ. ಬಿ. ಲಕ್ಷ್ಮೀಕಾಂತ್ ನಿಧನ

ತುಮಕೂರು ಜಿಲ್ಲಾ ವಾರ್ತಾ ಮತ್ತು ಪ್ರಚಾರಾಧಿಕಾರಿ ಕೆ. ಬಿ. ಲಕ್ಷ್ಮೀಕಾಂತ್
1 ಜೂನ್ 1995 ಹೃದಯಾಘಾತದಿಂದ ನಿಧನರಾದರು. ಅವರಿಗೆ 42ವರ್ಷ
ವಯಸ್ಸಾಗಿತ್ತು.

ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲ್ಲೂಕ್ ಕಲ್ಲಹಳ್ಳಿ ಗ್ರಾಮಕ್ಕೆ ಸೇರಿ
ಇವರು ದಕ್ಷತೆ, ಪ್ರಾಮಾಣಿಕತೆ, ಸರಳತೆ ಸಜ್ಜನಿಕೆ ಹೊಂದಿ ಉತ್ತಮ ಬರಹಗಾ
ರಾಗಿದ್ದರು. ಸ್ನೇಹಪೂರ್ಣ ವ್ಯಕ್ತಿತ್ವವುಳ್ಳ ಇವರು ಶ್ರೀ ಮಠದೊಂದಿಗೆ ಉತ್ತಮ
ಬಾಂಧವ್ಯ ಬೆಳೆಸಿಕೊಂಡಿದ್ದರು.

ಇವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಭಗವಂತ ಅವ
ಕುಟುಂಬ ವರ್ಗಕ್ಕೆ ನೀಡಲಿ ಎಂದು "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.



ಸ್ಥಾಪನೆ : 1943　　　　　ತಂತಿ : 'ವೀರಶೈವ'

ಕೆ.ಎಸ್.ಟಿ. 73606285 }
ಸಿ.ಎಸ್.ಟಿ. 73656288 } ದಿ 24-8-62　　ಕೇಂದ್ರ ಕಛೇರಿ : { 72866 / 70204

ಮಿನಿ ಬಜಾರ್: 351114

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅರ್ಪಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಗಂಳೂರು 560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.

ಗ್ರಾಹಕರ ಮನೆಗಳಿಗೆ ಸರಬರಾಜು ವವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ :　　ಸದಸ್ಯರಿಂದ ರೂ. 7.08 ಲಕ್ಷ
ಸರ್ಕಾರದಿಂದ ರೂ. 13-42 ಲಕ್ಷ
ಒಟ್ಟು ರೂ. 20.50 ಲಕ್ಷ

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಸಂಸ್ಥೆಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಆಡಳಿತ ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :
ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು ಅಧ್ಯಕ್ಷರು
ಶ್ರೀ ಜಿ.ತೋಟದಪ್ಪನವರು ಉಪಾಧ್ಯಕ್ಷರು
-: ನಿರ್ದೇಶಕರು :-
ಶ್ರೀ ಬಿ. ಎಸ್. ಪರಮಶಿವಯ್ಯನವರು
ಶೀ ವೈ. ಟಿ. ಮಹದೇವಪ್ಪನವರು
ಶೀ ಬಿ. ಟಿ. ಉಮೇಶ್‌ರವರು
ಶ್ರೀ ಬಿ. ಬಸವರಾಜುರವರು
ಶ್ರೀ ಎಂ. ಶಿವಪ್ಪನವರು
ಶ್ರೀ ಡಿ. ಚಂದ್ರಶೇಖರಯ್ಯನವರು
ಶ್ರೀ ಆರ್. ನೀಲಕಂಠಯ್ಯನವರು
ಶ್ರಿ ಶಿವಕುಮಾರ್‌ರವರು

11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳ
ಉಪನಿಬಧಂಕರ ಕಛೇರಿ,
ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು


ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ,
ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.
Hotel Shree Nanjundeswara
ಹೋಟೆಲ್
ಶ್ರೀ ನಂಜುಂಡೇಶ್ವರ
ಊಟ, ವಸತಿ ಮತ್ತು
ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು.
ದೂರವಾಣಿ
8597, 2373, 2577
SRI NANJUNDESWARA
ಶ್ರೀ ನಂಜುಂಡೇಶ್ವರ
ಬೇಕರಿ
ತುಮಕೂರು ಜಿಲ್ಲೆಯ ಪ್ರಖ್ಯಾತ
ಬೇಕರಿ
ಚಿಕ್ಕಪೇಟೆ ತುಮಕೂರು.
ದೂರವಾಣಿ : 8077
ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು.
ದೂರವಾಣಿ : 2677
ಸಿ.ವಿ. ಮಹದೇವಯ್ಯ
ಶ್ರೀ ನಂಜುಂಡೇಶ್ವರ ಸ್ವೀಟ್ಸ್
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು.
ದೂರವಾಣಿ : 2077

"SIDDAGANGA" MONTHLY Reg. No. KRNQ - 9



ನಿರ್ಮಾಣದ ಹಂತದಲ್ಲಿರುವ ಏಕಕಾಲದಲ್ಲಿ 3500 ಮಂದಿ
ಕುಳಿತು ಊಟಮಾಡುವ ಸುಸಜ್ಜಿತ ಪ್ರಸಾದನಿಲಯ



ನಿರ್ಮಾಣದ ಹಂತದಲ್ಲಿರುವ ಪೂಜ್ಯ ಶ್ರೀ ಶ್ರೀಗಳವರ
ವಜ್ರ ಮಹೋತ್ಸವ ಸ್ಮಾರಕ ಬೃಹತ್ ವಿದ್ಯಾರ್ಥಿನಿಲಯ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ – 572104.